WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಜೂನ್ ೭, ೨೦೧೨ (ಜ್ಯೇಷ್ಠ ೧೭, ಶಕ ವರ್ಷ ೧೯೩೪) | ಸಂಚಿಕೆ ೨೩ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ, ಬೆಂಗಳೂರು.**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿಪಿಆರ್ 186(2)/ಎಂಜಿಎನ್‌ಆರ್‌ಇಜಿಎ 2011 ಬೆಂಗಳೂರು, ದಿನಾಂಕ:10–01–2012**

**ಕರ್ನಾಟಕದಲ್ಲಿ ಸಾಮಾಜಿಕ ಪರಿಶೋಧನಾ ನಿಯಮಗಳು, 2011ರ ಯೋಜನಾ ಅನುಷ್ಠಾನ**

ಎಂಜಿಎನ್‌ಆರ್‌ಇಜಿಎ 2005ರ 24ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ, 2005, ದಿನಾಂಕ:07–09–2005ನ್ನು ಭಾರತ ಸರ್ಕಾರವು ಅಧಿನಿಯಮಿತಗೊಳಿಸಿರುವುದರಿಂದ ಹಾಗೂ ದಿನಾಂಕ:30–6–2011ರಂದು ಯೋಜನೆಯ ಪರಿಶೋಧನಾ ನಿಯಮಗಳು, 2011ನ್ನು ರೂಪಿಸಿರುವುದರಿಂದ, ಎಂಜಿಎನ್‌ಆರ್‌ಇಜಿಎ 2005ರ 32ನೇ ಪ್ರಕರಣದಡಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಸದರಿ ಅಧಿಸೂಚನೆಯ 3ನೇ ನಿಯಮವು ರಾಜ್ಯ ಸರ್ಕಾರಗಳಿಗೆ, ಸಾಮಾಜಿಕ ಪರಿಶೋಧನಾ ನಿಯಮಗಳು, 2011ನ್ನು ಅಧಿಸೂಚಿಸಲು ಕಡ್ಡಾಯಗೊಳಿಸುವುದರಿಂದ, ಕರ್ನಾಟಕ ಸರ್ಕಾರವು, ಕರ್ನಾಟಕದಲ್ಲಿ ಸಾಮಾಜಿಕ ಪರಿಶೋಧನೆಯ ಈ ಕೆಳಗಿನ ಯೋಜನಾ ಅನುಷ್ಠಾನವನ್ನು ಈ ಮೂಲಕ ಮಾಡುತ್ತದೆ ಮತ್ತು ಅಧಿಸೂಚಿಸುತ್ತದೆ.

**I. ಚಿಕ್ಕ ಶೀರ್ಷಿಕೆ ಮತ್ತು ಪ್ರಾರಂಭ :**

1) ಈ ನಿಯಮಗಳನ್ನು ಕರ್ನಾಟಕದಲ್ಲಿ ಸಾಮಾಜಿಕ ಪರಿಶೋಧನಾ ನಿಯಮಗಳು, 2011ರ ಎಂಜಿಎನ್‌ಆರ್‌ಇಜಿಎ ಯೋಜನಾ ಅನುಷ್ಠಾನವೆಂದು ಕರೆಯಬಹುದು.

2) ಈ ನಿಯಮಗಳ ಉದ್ದೇಶಕ್ಕಾಗಿ, ಯೋಜನೆಗಳ ಲೆಕ್ಕಪರಿಶೋಧನೆಯು ಸಾಮಾಜಿಕ ಪರಿಶೋಧನೆಯನ್ನು ಒಳಗೊಳ್ಳತಕ್ಕದ್ದು.

3) ಅಧಿಕೃತ ರಾಜಪತ್ರದಲ್ಲಿ ಅವು ಪ್ರಕಟವಾದ ದಿನಾಂಕದಿಂದ ಅವು ಜಾರಿಗೆ ಬರತಕ್ಕದ್ದು.

**II. ಸಾಮಾಜಿಕ ಪರಿಶೋಧನಾ ಘಟಕದ ರಚನೆ:**

ಗ್ರಾಮಸಭೆಗಳಿಂದ ಸಾಮಾಜಿಕ ಪರಿಶೋಧನೆಯ ಅನುಷ್ಠಾನಕ್ಕಾಗಿ ಯೋಗ್ಯವೆಂದು ಭಾವಿಸುವಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ನೇಮಕ ಮಾಡಿಕೊಳ್ಳುವಂಥ ಅನುಕೂಲದಾರರನ್ನು ಒಳಗೊಂಡ ಒಂದು ಸ್ವತಂತ್ರ ಸಂಘವನ್ನು ರಚಿಸಲಾಗುತ್ತದೆ. ಇಡೀ ಸಾಮಾಜಿಕ ಪರಿಶೋಧನಾ ನಿರ್ದೇಶನಾಲಯವು, ಸಂಘಗಳ ನೋಂದಣಿ ಅಧಿನಿಯಮ, 1960ರ ಅಡಿಯಲ್ಲಿ ನೋಂದಣಿಯಾಗುವ ಸಮಾಜದ ಉಪ–ವಿಧಿ ಉಪಬಂಧಗಳು ಮತ್ತು

ಭಾರತ ಸರ್ಕಾರ ಹಾಗೂ ಕರ್ನಾಟಕ ಸರ್ಕಾರದಿಂದ ಕಾಲಕಾಲಕ್ಕೆ ಜಾರಿಯಾದ ನಿರ್ದೇಶನಗಳು ಹಾಗೂ ಮಾರ್ಗಸೂಚಿಗಳ ಅಡಿಯಲ್ಲಿ ಕಾರ್ಯನಿರ್ವಹಿಸುತ್ತದೆ.

| | | |
|---|---|---|
| 1) ನಿರ್ದೇಶಕರು | : | ಸಂಸ್ಥೆಯ ಮುಖ್ಯಸ್ಥರು |
| 2) ಜಂಟಿ ನಿರ್ದೇಶಕರು | : | ನಿರ್ದೇಶಕರಿಗೆ ನೆರವು ನೀಡುವುದು (ನಿಯೋಜನೆ ಮೇಲೆ/ ನಿವೃತ ವ್ಯಕ್ತಿಗಳು) |
| 3) ರಾಜ್ಯ ಸಂಪನ್ಮೂಲ ವ್ಯಕ್ತಿಗಳು | : | 4 ಮಂದಿ |
| 4) ಜಿಲ್ಲಾ ಸಂಪನ್ಮೂಲ ವ್ಯಕ್ತಿಗಳು | : | 30 ಮಂದಿ ಸಂಪನ್ಮೂಲ ವ್ಯಕ್ತಿಗಳು (ಪ್ರತಿಯೊಂದು ಜಿಲ್ಲೆಗೆ ಒಬ್ಬರು) |
| 5) ತಾಲ್ಲೂಕು ಸಂಪನ್ಮೂಲ ವ್ಯಕ್ತಿಗಳು | : | 12 ಗ್ರಾಮಪಂಚಾಯಿತಿಗಳಿಗೆ ಒಬ್ಬರು ಸಂಪನ್ಮೂಲ ವ್ಯಕ್ತಿ |
| 6) ಗ್ರಾಮ ಪಂಚಾಯಿತಿ ಸಂಪನ್ಮೂಲ ವ್ಯಕ್ತಿಗಳು | : | ಕಾಮಗಾರಿಗಳ ಸಂಖ್ಯೆಯನ್ನವಲಂಬಿಸಿ ಪ್ರತಿಯೊಂದು ಗ್ರಾಮಪಂಚಾಯಿತಿಗೆ 2 ರಿಂದ 5 ಮಂದಿ ಸಂಪನ್ಮೂಲ ವ್ಯಕ್ತಿಗಳು, ವ್ಯಕ್ತಿಗಳ ಸಂಖ್ಯೆಯನ್ನು ನಿರ್ದೇಶಕರು ಅಧಿಸೂಚಿಸುವರು. |

ಅಖಿಲ ಭಾರತ ಸೇವೆಯ ನಿವೃತ್ತ ವ್ಯಕ್ತಿಯು/ರಾಜ್ಯ ಸೇವೆಯ ಆಯ್ಕೆ ಶ್ರೇಣಿ ನಿವೃತ್ತ ನಾಗರಿಕ ನೌಕರನು ಸಾಮಾಜಿಕ ಪರಿಶೋಧನೆಯ ಮುಖ್ಯಸ್ಥರಾಗಿರತಕ್ಕದ್ದು.

**III. ಸಾಮಾಜಿಕ ಪರಿಶೋಧನಾ ಘಟಕದ ಅಧಿಕಾರಿಗಳು ಮತ್ತು ಸಿಬ್ಬಂದಿಯ ಕರ್ತವ್ಯಗಳು ಹಾಗೂ ಹೊಣೆಗಾರಿಕೆಗಳು:**

**1) ನಿರ್ದೇಶಕರು**

1. ಸಂಘದ ದೈನಂದಿನ ಕೆಲಸಕಾರ್ಯಗಳನ್ನು ನಿರ್ವಹಿಸುವುದು.
2. ಸಂಘಕ್ಕೆ ಸಂಬಂಧಿಸಿದ ಕಾರ್ಯನೀತಿ ಮಟ್ಟದ ನಿರ್ಣಯಗಳು ಅನುಷ್ಠಾನವಾಗಿವೆಯೇ ಎಂಬುದನ್ನು ಖಚಿತಪಡಿಸುವುದು.
3. ಸಂಘದ ಉದ್ದೇಶ ಮತ್ತು ಗುರಿಯನ್ನು ಸಾಧಿಸಲು ಅಗತ್ಯವಿರುವ ಎಲ್ಲಾ ಚಟುವಟಿಕೆಗಳನ್ನು ಕೈಗೊಳ್ಳುವುದು.
4. ಎಂಜಿಎನ್‌ಆರ್‌ಇಜಿಎಸ್ ಯೋಜನೆಗಳ ಪರಿಶೋಧನಾ ನಿಯಮಗಳು, 2011ರ ಉಪಬಂಧಗಳನ್ನು ಕಾರ್ಯಗತಗೊಳಿಸಲು ಅಗತ್ಯವಿರುವ ಎಲ್ಲಾ ಚಟುವಟಿಕೆಗಳನ್ನು ಕೈಗೊಳ್ಳುವುದು.
5. ವರ್ಷದ ಪ್ರಾರಂಭದಲ್ಲಿ ಪ್ರತಿ ಆರು ತಿಂಗಳಿಗೊಮ್ಮೆ ಪ್ರತಿಯೊಂದು ಗ್ರಾಮ ಪಂಚಾಯಿತಿಯಲ್ಲಿ ಕನಿಷ್ಠ ಒಂದು ಸಾಮಾಜಿಕ ಪರಿಶೋಧನೆಯನ್ನು ನಡೆಸಲು ವಾರ್ಷಿಕ ವೇಳಾಪಟ್ಟಿಯನ್ನು ರೂಪಿಸುವುದು ಮತ್ತು ವೇಳಾಪಟ್ಟಿಯ ಒಂದು ಪ್ರತಿಯನ್ನು ಅಗತ್ಯ ಏರ್ಪಾಡುಗಳಿಗಾಗಿ ಎಲ್ಲಾ ಡಿಪಿಸಿಗಳಿಗೆ ಕಳುಹಿಸುವುದು.
6. ಇಡೀ ರಾಜ್ಯದಲ್ಲಿ ಎಮ್‌ಜಿಎನ್‌ಆರ್‌ಇಜಿಎಯ ಸಾಮಾಜಿಕ ಪರಿಶೋಧನೆಯ ಪ್ರತಿಯೊಂದು ವಿಷಯಗಳ ಉಸ್ತುವಾರಿ ಮತ್ತು ಜವಾಬ್ದಾರರಾಗಿರುವುದು.
7. ಸಿಬ್ಬಂದಿಯನ್ನು ನೇಮಿಸುವುದು, ಸಮಾಲೋಚನಾ ಕರಾರುಗಳನ್ನು ನೀಡುವುದು ಮತ್ತು ನಿರ್ದೇಶನಾಲಯದ ದಿನನಿತ್ಯದ ವ್ಯವಹಾರಗಳನ್ನು ನಿರ್ವಹಿಸಲು ಅಗತ್ಯವಿರುವ ವೆಚ್ಚಗಳನ್ನು ಭರಿಸುವುದು.
8. ಕರಾರು ನಿಯಮಗಳು ಅಥವಾ ಅನ್ವಯಿಸಬಹುದಾದ ನಿಯಮಗಳ ಪ್ರಕಾರ, ಸಿಬ್ಬಂದಿಯ ಮೇಲೆ ಶಿಸ್ತು ಕ್ರಮ ಕೈಗೊಳ್ಳುವುದು.
9. ಸಾಮಾಜಿಕ ಪರಿಶೋಧನೆಯಿಂದ ಪತ್ತೆಯಾದ ಅಂಶಗಳ ಆಧಾರದ ಮೇಲೆ ಅನುಸರಣ ಕ್ರಮವನ್ನು ಕೈಗೊಳ್ಳಲು ಜವಾಬ್ದಾರರಾಗಿರತಕ್ಕದ್ದು.
10. ಸಾಮಾಜಿಕ ಪರಿಶೋಧನೆಗಳನ್ನು ನಡೆಸಲು ಸಂಪನ್ಮೂಲ ಆಧಾರವನ್ನು ಸೃಜಿಸುವುದು.
11. ಸಾಮಾಜಿಕ ಪರಿಶೋಧನೆ ಕುರಿತು ಕೈಗೊಂಡ ಕ್ರಮವನ್ನು ಮೇಲ್ವಿಚಾರಣೆ ಮಾಡಲು ರಾಜ್ಯ ಉದ್ಯೋಗ ಪರಿಷತ್ತಿಗೆ ನೆರವು ನೀಡುವುದು ಮತ್ತು ರಾಜ್ಯ ವಿಧಾನಮಂಡಲದಲ್ಲಿ ಮಂಡಿಸುವ ವಾರ್ಷಿಕ ವರದಿಯಲ್ಲಿ ಕೈಗೊಂಡ ಕ್ರಮದ ವರದಿಯನ್ನು ಸೇರ್ಪಡೆ ಮಾಡಲು ವರದಿ ಸಿದ್ಧತೆ ಮಾಡುವುದು.
12. ಭಾರತದ ನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕ(ಸಿಎಜಿ)–ಇವರಿಗೆ ರಾಜ್ಯ ಸರ್ಕಾರದಿಂದ ಸಲ್ಲಿಸುವ ಹಣಕಾಸು ವರ್ಷದ ಅವಧಿಯಲ್ಲಿ ನಡೆಸಿದ ಸಾಮಾಜಿಕ ಪರಿಶೋಧನೆಯಲ್ಲಿ ಪತ್ತೆಯಾದ ಅಂಶಗಳ ಸಾರಾಂಶವನ್ನು ಸಿದ್ಧಪಡಿಸುವುದು.

**2) ಜಂಟಿ ನಿರ್ದೇಶಕರು**

1. ನಿರ್ದೇಶಕರು ನಿರ್ವಹಿಸುವ ಕರ್ತವ್ಯಗಳಲ್ಲಿ ಸಹಾಯ ಮಾಡುವುದು.

**3) ರಾಜ್ಯ ಸಂಪನ್ಮೂಲ ವ್ಯಕ್ತಿಗಳು.**

1. ನಿರ್ದೇಶಕರು/ಜಂಟಿ ನಿರ್ದೇಶಕರು ತಮ್ಮ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ನೆರವು ನೀಡುವುದು.
2. ಸಾಮಾಜಿಕ ಪರಿಶೋಧನೆಯ ಪ್ರತಿಯೊಂದು ಪ್ರಕ್ರಿಯೆಯೂ ಸಂಬಂಧಪಟ್ಟವರ ವ್ಯಾಪ್ತಿಯಲ್ಲಿ ನಡೆದ ಸಾಮಾಜಿಕ ಪರಿಶೋಧನೆಯಲ್ಲಿ ಪತ್ತೆಯಾದ ವಿವಾದಾಂಶಗಳ ಮೇಲೆ ಕ್ರಮಕೈಗೊಳ್ಳುವ ವ್ಯವಸ್ಥಾಪನೆಯ ತಪಶೀಲು ಪಟ್ಟಿಯನ್ನು ಅಭಿವೃದ್ಧಿಪಡಿಸುವ ಸಾಮಾಜಿಕ ಪರಿಶೋಧನೆಯ ಪ್ರತಿಯೊಂದು ಪ್ರಕ್ರಿಯೆಯ ಉಸ್ತುವಾರಿ ಮಾಡಲು ಜವಾಬ್ದಾರರಾಗಿರುವರು.
3. ಜಿಲ್ಲಾ ಮತ್ತು ತಾಲ್ಲೂಕು ಸಂಪನ್ಮೂಲ ವ್ಯಕ್ತಿಗಳು ಸಂಬಂಧಪಟ್ಟ ಪ್ರದೇಶಗಳಲ್ಲಿ ಕಾರ್ಯನಿರ್ವಹಿಸುವುದನ್ನು ಮೇಲ್ವಿಚಾರಣೆ ಮಾಡುವುದು.
4. ಅವರಿಗೆ ಸಂಬಂಧಪಟ್ಟ ಪ್ರದೇಶಗಳಲ್ಲಿ ಸಾಮಾಜಿಕ ಪರಿಶೋಧನೆಯ ಬಗ್ಗೆ ವರದಿಗಳನ್ನು ಸಿದ್ಧಪಡಿಸುವುದು ಹಾಗೂ ಸಲ್ಲಿಸುವುದು.
5. ಸಂಬಂಧಪಟ್ಟ ಪ್ರದೇಶಗಳಲ್ಲಿ ಸಾಮಾಜಿಕ ಪರಿಶೋಧನಾ ಪ್ರಕ್ರಿಯೆಯಲ್ಲಿ ಯಾವುದೇ ಲೋಪಗಳುಂಟಾದ ಸಂದರ್ಭದಲ್ಲಿ ಆ ಬಗ್ಗೆ ವರದಿ ಮಾಡುವುದು ಮತ್ತು ತನಿಖೆಗಳನ್ನು ನಡೆಸುವುದು.
6. ಸಂಬಂಧಪಟ್ಟ ಪ್ರದೇಶಗಳಲ್ಲಿ ಸಾಮಾಜಿಕ ಪರಿಶೋಧನಾ ಪ್ರಕ್ರಿಯೆಯ ವಿವಿಧ ವಿಷಯಗಳ ಬಗ್ಗೆ ಅಧಿಕಾರಿಗಳನ್ನು ಸಂಪರ್ಕಿಸುವುದು.
7. ಸಂಬಂಧಪಟ್ಟ ಪ್ರದೇಶಗಳ ಆರ್ಥಿಕ ವರ್ಷದ ಅವಧಿಯಲ್ಲಿ ನಡೆಸಲಾದ ಸಾಮಾಜಿಕ ಪರಿಶೋಧನೆಯಲ್ಲಿ ಪತ್ತೆ ಮಾಡಿರುವುದರ ಸಾರಾಂಶವನ್ನು ಸಿದ್ಧಪಡಿಸುವುದು.
8. ಸಾಮಾಜಿಕ ಪರಿಶೋಧನೆಯ ಬಗ್ಗೆ ಕೈಗೊಂಡ ಕ್ರಮವನ್ನು ಮೇಲ್ವಿಚಾರಣೆ ಮಾಡುವುದು ಮತ್ತು ಸಂಬಂಧಪಟ್ಟ ಪ್ರದೇಶಗಳ ಸಾಮಾಜಿಕ ಪರಿಶೋಧನಾ ವರದಿಯನ್ನು ಸಿದ್ಧಪಡಿಸುವುದು.
9. ಆಡಳಿತಾತ್ಮಕ ಪ್ರಕಾರ್ಯಗಳಿಗೆ ಸಂಬಂಧಪಟ್ಟ ಇತರೆ ಯಾವುದಾದರೂ ಸಮಂಜಸವಾದ ಕ್ರಮ ಕೈಗೊಳ್ಳುವುದು.

**4) ಜಿಲ್ಲಾ ಸಂಪನ್ಮೂಲ ವ್ಯಕ್ತಿಗಳು.**

1. ರಾಜ್ಯ ಸಂಪನ್ಮೂಲ ವ್ಯಕ್ತಿಗಳು ನಿರ್ವಹಿಸುವ ಕರ್ತವ್ಯಗಳಲ್ಲಿ ಸಹಾಯ ಮಾಡುವುದು.
2. ಹಂಚಿಕೆ ಮಾಡಲಾದ ಜಿಲ್ಲೆಗಳಲ್ಲಿ ಸಾಮಾಜಿಕ ಪರಿಶೋಧನೆಗಳಿಗೆ ಅನುಕೂಲ ಮಾಡಿಕೊಡುವುದು ಮತ್ತು ಸಾಮಾಜಿಕ ಪರಿಶೋಧನೆ ನಡೆಸುವುದು.
3. ಸಾಮಾಜಿಕ ಪರಿಶೋಧನೆಯ ಪ್ರತಿಯೊಂದು ಪ್ರಕ್ರಿಯೆಯೂ ಸಂಬಂಧಪಟ್ಟವರ ವ್ಯಾಪ್ತಿಯಲ್ಲಿ ನಡೆದ ಸಾಮಾಜಿಕ ಪರಿಶೋಧನೆಯಲ್ಲಿ ಪತ್ತೆಯಾದ ವಿವಾದಾಂಶಗಳ ಮೇಲೆ ಕ್ರಮಕೈಗೊಳ್ಳುವ ವ್ಯವಸ್ಥಾಪನೆಯ ತಪಶೀಲು ಪಟ್ಟಿಯನ್ನು ಅಭಿವೃದ್ಧಿಪಡಿಸುವ ಸಾಮಾಜಿಕ ಪರಿಶೋಧನೆಯ ಪ್ರತಿಯೊಂದು ಪ್ರಕ್ರಿಯೆಯ ಉಸ್ತುವಾರಿ ಮಾಡಲು ಜವಾಬ್ದಾರರಾಗಿರುವರು.
4. ಹಂಚಿಕೆ ಮಾಡಲಾದ ಜಿಲ್ಲೆಗಳಲ್ಲಿ ತಾಲ್ಲೂಕು ಸಂಪನ್ಮೂಲ ವ್ಯಕ್ತಿಗಳು ಕಾರ್ಯನಿರ್ವಹಿಸುವುದನ್ನು ಮೇಲ್ವಿಚಾರಣೆ ಮಾಡುವುದು.
5. ಸಂಬಂಧಪಟ್ಟ ಜಿಲ್ಲೆಯ ಆರ್ಥಿಕ ವರ್ಷದ ಅವಧಿಯಲ್ಲಿ ನಡೆಸಲಾದ ಸಾಮಾಜಿಕ ಪರಿಶೋಧನೆಗಳ ನಿರ್ಣಯಗಳ ಸಾರಾಂಶವನ್ನು ಸಿದ್ಧಪಡಿಸುವುದು.
6. ಸಾಮಾಜಿಕ ಪರಿಶೋಧನೆಯ ಬಗ್ಗೆ ಕೈಗೊಂಡ ಕ್ರಮವನ್ನು ಮೇಲ್ವಿಚಾರಣೆ ಮಾಡುವುದು ಮತ್ತು ಸಂಬಂಧಪಟ್ಟ ಜಿಲ್ಲೆಗೆ ಸಂಬಂಧಿಸಿದಂತೆ ಕೈಗೊಂಡ ಕ್ರಮದ ವರದಿಯನ್ನು ಸಿದ್ಧಪಡಿಸುವುದು.
7. ಹಂಚಿಕೆ ಮಾಡಲಾದ ಜಿಲ್ಲೆಗಳಲ್ಲಿ ಸಾಮಾಜಿಕ ಪರಿಶೋಧನೆ ಕುರಿತ ವರದಿಗಳನ್ನು ಸಿದ್ಧಪಡಿಸುವುದು ಮತ್ತು ಸಲ್ಲಿಸುವುದು.
8. ಕ್ರಮಕೈಗೊಂಡ ವರದಿಯೊಂದಿಗೆ ಸಾರ್ವಜನಿಕ ಮಾಹಿತಿ ಕೋಶದಲ್ಲಿ ಪ್ರಕಟಿಸುವುದು.
9. ಮೇಲಧಿಕಾರಿಗಳು ವಹಿಸುವ ಇತರೆ ಯಾವುದಾದರೂ ಆಡಳಿತಾತ್ಮಕ ಜವಾಬ್ದಾರಿಗಳು.

**5) ತಾಲ್ಲೂಕು ಸಂಪನ್ಮೂಲ ವ್ಯಕ್ತಿಗಳು.**

1. ಜಿಲ್ಲಾ ಸಂಪನ್ಮೂಲ ವ್ಯಕ್ತಿಯು ನಿರ್ವಹಿಸುವ ಕರ್ತವ್ಯಗಳಲ್ಲಿ ಸಹಾಯ ಮಾಡುವುದು.
2. ಗ್ರಾಮ ಮಟ್ಟದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮದ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಬಗ್ಗೆ ಅರಿವು ಮೂಡಿಸುವುದು ಸೇರಿದಂತೆ ಗ್ರಾಮ ಪಂಚಾಯಿತಿಯಲ್ಲಿ ಸಾಮಾಜಿಕ ಪರಿಶೋಧನೆಗೆ ಅನುಕೂಲ ಮಾಡಿಕೊಡುವುದು ಮತ್ತು ನಡೆಸುವುದು.
3. ಗ್ರಾಮಸಭೆಯಲ್ಲಿ ಮತ್ತು ಸಾರ್ವಜನಿಕ ವಿಚಾರಣೆಗಳಲ್ಲಿ ಸಾಮಾಜಿಕ ಪರಿಶೋಧನಾ ನಿರ್ಣಯಗಳನ್ನು ಮಂಡಿಸಲು ಅನುಕೂಲ ಮಾಡಿಕೊಡುವುದು.
4. ಸಾಮಾಜಿಕ ಪರಿಶೋಧನಾ ವರದಿಗಳನ್ನು ಬರೆಯುವುದು ಮತ್ತು ಸಾಮಾಜಿಕ ಪರಿಶೋಧನೆಯಲ್ಲಿ ಪತ್ತೆಯಾದ ಅಂಶಗಳ ಮೇಲೆ ಅನುಸರಣಾ ಕ್ರಮ ಕೈಗೊಳ್ಳುವುದನ್ನು ಖಚಿತ ಪಡಿಸುವುದು.

5. ಗ್ರಾಮ ಪಂಚಾಯಿತಿ ಸಂಪನ್ಮೂಲ ವ್ಯಕ್ತಿಗಳ ಕಾರ್ಯಗಳಿಗೆ ಅನುಕೂಲ ಮಾಡಿಕೊಡುವುದು ಮತ್ತು ಅವರ ವರದಿಗಳನ್ನು ಕ್ರೋಡೀಕರಿಸುವುದು ಹಾಗೂ ಅವುಗಳನ್ನು ಗ್ರಾಮಸಭೆಯ ಮುಂದೆ ಮಂಡಿಸುವುದು.
6. ಗ್ರಾಮ ಪಂಚಾಯಿತಿ ಸಂಪನ್ಮೂಲ ವ್ಯಕ್ತಿಗಳ ತರಬೇತಿಗೆ ಉತ್ತೇಜಿಸುವುದು.
7. ಸಂಬಂಧಪಟ್ಟ ತಾಲ್ಲೂಕಿನಲ್ಲಿ ಆರ್ಥಿಕ ವರ್ಷದ ಅವಧಿಯಲ್ಲಿ ನಡೆಸಿದ ಸಾಮಾಜಿಕ ಪರಿಶೋಧನಾ ವರದಿಗಳ ಸಾರಾಂಶವನ್ನು ಸಿದ್ಧಪಡಿಸುವುದು.
8. ಸಾಮಾಜಿಕ ಪರಿಶೋಧನೆಯ ಮೇಲಿನ ಕ್ರಮಗಳನ್ನು ವ್ಯವಸ್ಥಾಪಿಸುವುದು ಮತ್ತು ಸಂಬಂಧಪಟ್ಟ ತಾಲ್ಲೂಕಿಗೆ ಸಂಬಂಧಿಸಿದಂತೆ ಕ್ರಮಕೈಗೊಂಡ ವರದಿಯನ್ನು ಸಿದ್ಧಪಡಿಸುವುದು.
9. ಸಾಮಾಜಿಕ ಪರಿಶೋಧನೆಯ ಗ್ರಾಮ ಸಭೆಗೆ ಆಗಮಿಸುವಂತೆ ಜನರನ್ನು ಸಜ್ಜುಗೊಳಿಸುವುದು.
10. ಮೇಲಧಿಕಾರಿಗಳು ವಹಿಸಬಹುದಾದ ಇತರೆ ಯಾವುದಾದರೂ ಆಡಳಿತಾತ್ಮಕ ಜವಾಬ್ದಾರಿಗಳು.

**6) ಗ್ರಾಮ ಪಂಚಾಯಿತಿ ಸಂಪನ್ಮೂಲ ವ್ಯಕ್ತಿಗಳು.**

1. ಗ್ರಾಮಮಟ್ಟದಲ್ಲಿ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕುರಿತ ಅರಿವು ಮೂಡಿಸಲು ಘೋಷಣೆಗಳು, ಹಾಡುಗಳು ಇತ್ಯಾದಿಯನ್ನು ಬಳಸಿ, ಸಾಮಾಜಿಕ ಪರಿಶೋಧನಾ ಪ್ರಕ್ರಿಯೆಗಾಗಿ, ವೇತನ ಅಪೇಕ್ಷಿಸುವ ಕೆಲಸಗಾರರನ್ನು ಹಾಗೂ ಗ್ರಾಮ ಸಮುದಾಯವನ್ನು ಸಜ್ಜುಗೊಳಿಸುವುದು.

2. **ಪ್ರಾಥಮಿಕ ಫಲಾನುಭವಿಗಳೊಂದಿಗೆ ಈ ಕೆಳಕಂಡಂತೆ ತಪಾಸಣೆ ಮಾಡುವುದು.**
   ಎ) ಸಂಬಂಧಪಟ್ಟ ಹಾಜರಿ ಪಟ್ಟಿಯಲ್ಲಿ ನಮೂದಾದ ಕೂಲಿಕಾರರನ್ನು ಸಂಪರ್ಕಿಸಿ ನಿರ್ದಿಷ್ಟಪಡಿಸಲಾದ ಕಾಲಾವಧಿಯಲ್ಲಿ ನಮೂದಾದ ಹಾಜರಿಗಳು ಹಾಗೂ ಸಂದಾಯಗಳು ಮತ್ತು ಮಜೂರಿಗಳನ್ನು ಪರಿಶೀಲಿಸುವುದು.
   ಬಿ) ಕೆಲಸದ ಸ್ಥಳ ಮತ್ತು ದಾಖಲೆಗಳಿಗೆ ಸಂಬಂಧಪಟ್ಟಂತೆ ಪ್ರಮಾಣವನ್ನು ತಿಳಿಯುವುದು ಅಲ್ಲದೆ ಮಾಡಲಾದ ಕಾರ್ಯದ ಗುಣಮಟ್ಟವನ್ನೂ ಸಹ ಪರಿಶೀಲಿಸತಕ್ಕದ್ದು.
   ಸಿ) ಅನುಷ್ಠಾನವಾದ ಕಾಮಗಾರಿಗಳ ಗುಣಮಟ್ಟವನ್ನು ಪರಿಶೀಲಿಸಲು ನಗದುಪುಸ್ತಕ, ಬ್ಯಾಂಕ್ ವಿವರಣಪಟ್ಟಿ ಹಾಗೂ ಇತರ ಹಣಕಾಸು ದಾಖಲಾತಿ ಪುಸ್ತಕವನ್ನು ಪರಿಶೀಲಿಸುವುದು.
   ಡಿ) ಸಂಗ್ರಹಣೆ ಅಂದಾಜು ಮತ್ತು ರೂಪಿಸಿದ ಪ್ರಕ್ರಿಯೆ ಪ್ರಕಾರ ಸಾಮಾಗ್ರಿಗಳ ಸಂಗ್ರಹಣೆಯನ್ನು ಮತ್ತು ಕಾರ್ಮಿಕರ ಹಕ್ಕುಗಳು ಮತ್ತು ಅರ್ಹತೆಗಳಿಗೆ ಸಂಬಂಧಿಸಿದಂತೆ ಅವುಗಳನ್ನು ಆರ್ಥಿಕವಾಗಿ ಪೂರೈಸಲಾಗಿದೆಯೇ ಹಾಗೂ ನಿಧಿಗಳನ್ನು ಸೂಕ್ತವಾಗಿ ಬಳಕೆ ಮಾಡಲಾಗಿದೆಯೇ ಎಂಬುದನ್ನು ಪರೀಕ್ಷಿಸಲು ಅಂಥ ಸಂಗ್ರಹಣೆಗಳಿಗೆ ಬಳಸಲಾದ ಸರಕುಪಟ್ಟಿ, ಬಿಲ್‌ಗಳು, ವೋಚರ್‌ಗಳು ಮತ್ತು ಇತರ ಸಂಬಂಧಿತ ದಾಖಲೆಗಳನ್ನು ಪರಿಶೀಲಿಸುವುದು.

   ಇ) ಅನುಷ್ಠಾನ ಏಜೆನ್ಸಿಯಿಂದ ಮಾಡಲಾದ ಯಾವುದೇ ಇತರೆ ಸಂದಾಯಗಳು
   - ಸಾಕ್ಷ್ಯವನ್ನು ಸಂಗ್ರಹಿಸುವುದು ಮತ್ತು ಸಾಮಾಜಿಕ ಪರಿಶೋಧನೆಯ ಪ್ರಪತ್ರವನ್ನು ಭರ್ತಿ ಮಾಡುವುದು.
   - ಗ್ರಾಮಸಭೆಯಲ್ಲಿ ಸಾಮಾಜಿಕ ಪರಿಶೋಧನೆಯ ನಿರ್ಣಯವನ್ನು ಮಂಡಿಸುವುದು.
   - ಕಾರ್ಮಿಕರಿಗೆ ಅಧಿನಿಯಮದ ಅಡಿಯಲ್ಲಿ ಅವರ ಹಕ್ಕುಗಳು ಮತ್ತು ಅರ್ಹತೆಗಳ ಬಗ್ಗೆ ಅರಿವು ಮೂಡಿಸುವುದು.

**7) ಜಿಲ್ಲಾ ಮಟ್ಟದಲ್ಲಿ, ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿ ಮತ್ತು ಪದನಿಮಿತ್ತ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯ ಪಾತ್ರ ಹಾಗೂ ಹೊಣೆಗಾರಿಕೆ:**

1. ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ನಿರ್ದೇಶಕರಿಂದ ಸಾಮಾಜಿಕ ಪರಿಶೋಧನೆ ನಡೆಸಲು ವಾರ್ಷಿಕ ವೇಳಾಪಟ್ಟಿಯನ್ನು ಸ್ವೀಕರಿಸಿದ ಮೇಲೆ ಪ್ರತಿ ತಿಂಗಳು ಪ್ರತಿಯೊಂದು ಗ್ರಾಮ ಪಂಚಾಯಿತಿಯಲ್ಲಿ ಕನಿಷ್ಠ ಒಂದು ಸಾಮಾಜಿಕ ಪರಿಶೋಧನೆಯನ್ನು ನಡೆಸಲು ಅಗತ್ಯ ಏರ್ಪಾಡುಗಳನ್ನು ಮಾಡುವುದು.
2. ಜಿಲ್ಲಾ ಕಾರ್ಯಕ್ರಮ ಅಧಿಕಾರಿಯು(ಡಿಪಿಸಿ) ಗ್ರಾಮಸಭೆಯಲ್ಲಿ ಹಾಜರಾಗತಕ್ಕದ್ದು ಅಥವಾ ಗ್ರಾಮಸಭೆಯು ಸುಗಮವಾಗಿ ನಡೆಯುವುದಕ್ಕಾಗಿ ಸಮಾನಾಂತರ ಅಧಿಕಾರಿಯನ್ನು ನಾಮನಿರ್ದೇಶನ ಮಾಡತಕ್ಕದ್ದು.
3. ಸಾಮಾಜಿಕ ಪರಿಶೋಧನೆ ನಡೆಸುವುದಕ್ಕಾಗಿ ಅನುಷ್ಠಾನ ಏಜೆನ್ಸಿಗಳು ಕಾರ್ಯಕ್ರಮ ಅಧಿಕಾರಿಗಳ ಮುಖಾಂತರ ಎಲ್ಲಾ ದಾಖಲೆಗಳನ್ನು ಸಾಮಾಜಿಕ ಪರಿಶೋಧನಾಧಿಕಾರಿಗಳಿಗೆ ಒದಗಿಸಿದ್ದಾರೆಯೇ ಎಂಬುದನ್ನು ಖಚಿತಪಡಿಸಿಕೊಳ್ಳುವುದು.
4. ಸಾಮಾಜಿಕ ಪರಿಶೋಧನಾ ವರದಿಯ ಮೇಲೆ ಸರಿಯಾದ ಕ್ರಮ ಕೈಗೊಳ್ಳಲಾಗಿದೆಯೇ ಎಂಬುದನ್ನು ದೃಢಪಡಿಸುವುದು.
5. ದುರುಪಯೋಗವಾದ ಅಥವಾ ಅನುಚಿತವಾಗಿ ಬಳಕೆಯಾದ ಮೊತ್ತವನ್ನು ವಸೂಲು ಮಾಡಲು ಕ್ರಮಗಳನ್ನು ಕೈಗೊಳ್ಳುವುದು ಹಾಗೂ ಆ ರೀತಿಯಲ್ಲಿ ವಸೂಲು ಮಾಡಿದ ಮೊತ್ತಕ್ಕೆ ರಸೀದಿಗಳು ಅಥವಾ ಸ್ವೀಕೃತಿಯನ್ನು ನೀಡುವುದು.

6. ಸಾಮಾಜಿಕ ಪರಿಶೋಧನಾ ಪ್ರಕ್ರಿಯೆಯು ಅವಧಿಯಲ್ಲಿ ವಸೂಲು ಮಾಡಲಾದ ಮೊತ್ತಗಳಿಗೆ ಪ್ರತ್ಯೇಕ ಲೆಕ್ಕವನ್ನು ಇಡುವುದು.
7. ಸಾಮಾಜಿಕ ಪರಿಶೋಧನೆಯ ಸುಗಮವಾಗಿ ನಡೆಯಲು ಅನುಕೂಲ ಮಾಡಿಕೊಡುವುದು.
8. ಸಾಮಾಜಿಕ ಪರಿಶೋಧನೆ ಕುರಿತು ಕೈಗೊಂಡ ಕ್ರಮದ ವರದಿಯನ್ನು ನಿರ್ದೇಶನಾಲಯಕ್ಕೆ ಸಲ್ಲಿಸುವುದು.
9. ಸಾಮಾಜಿಕ ಪರಿಶೋಧನೆಯನ್ನು ನಡೆಸುವುದಕ್ಕಾಗಿ ಎಲ್ಲಾ ದಾಖಲೆಗಳನ್ನು ಅನುಷ್ಠಾನ ಏಜೆನ್ಸಿಗಳು ಕಾರ್ಯಕ್ರಮ ಅಧಿಕಾರಿ ಮೂಲಕ ಸಂಪನ್ಮೂಲ ವ್ಯಕ್ತಿಗಳಿಗೆ ಒದಗಿಸಲಾಗಿದೆಯೇ ಎಂಬುದನ್ನು ದೃಢಪಡಿಸುವುದು.
10. ಅಧಿನಿಯಮದ ಮೇರೆಗೆ ಯೋಜನೆಗಳಿಗಾಗಿ ಮೀಸಲಾದ ಮೊತ್ತವನ್ನು ದುರ್ಬಳಕೆ ಮಾಡಿದ ಅಥವಾ ದುರುಪಯೋಗ ಮಾಡಿದ ವ್ಯಕ್ತಿಗಳ ವಿರುದ್ಧ ಸೂಕ್ತ ಕ್ರಮವನ್ನು (ಕ್ರಿಮಿನಲ್ ಮೊಕದ್ದಮೆ/ಸಿವಿಲ್ ಮೊಕದ್ದಮೆ ಅಥವಾ ಸೇವೆಯನ್ನು ಕೊನೆಗೊಳಿಸುವುದು ಸೇರಿದಂತೆ) ಕೈಗೊಳ್ಳಲಾಗಿದೆಯೇ ಎಂಬುದನ್ನು ದೃಢಪಡಿಸುವುದು.
11. ಸಾಮಾಜಿಕ ಪರಿಶೋಧನೆಯ ಬಗ್ಗೆ ಕೈಗೊಂಡ ಕ್ರಮವನ್ನು ಮೇಲ್ವಿಚಾರಣೆ ಮಾಡುವುದು ಮತ್ತು ಸಂಬಂಧಪಟ್ಟ ಜಿಲ್ಲೆಯ ಕೈಗೊಂಡ ಕ್ರಮದ ವರದಿಯನ್ನು ಸಿದ್ಧಪಡಿಸುವುದು.
12. ಸಾಮಾಜಿಕ ಪರಿಶೋಧನಾ ಗ್ರಾಮಸಭೆ/ಸಾರ್ವಜನಿಕ ವಿಚಾರಣೆಯ ಅಧ್ಯಕ್ಷತೆಯನ್ನು ವಹಿಸುವ ಅಧಿಕಾರಿಯನ್ನು ಅಧಿಸೂಚಿಸುವುದು.

**8) ಕಾರ್ಯಕ್ರಮ ಅಧಿಕಾರಿ ಮತ್ತು ಪದನಿಮಿತ್ತ ಕಾರ್ಯನಿರ್ವಾಹಕ ಅಧಿಕಾರಿ.**

1. ಕಾರ್ಯಕ್ರಮ ಅಧಿಕಾರಿಯು ಉದ್ಯೋಗ ಚೀಟಿ ರಿಜಿಸ್ಟರು, ಉದ್ಯೋಗ ರಿಜಿಸ್ಟರು, ಕಾಮಗಾರಿ ರಿಜಿಸ್ಟರು, ಗ್ರಾಮಸಭೆ ನಿರ್ಣಯ, ಮಂಜೂರಾತಿಗಳ ಪ್ರತಿಗಳು (ಆಡಳಿತಾತ್ಮಕ ಅಥವಾ ತಾಂತ್ರಿಕ ಅಥವಾ ಹಣಕಾಸು), ಕಾಮಗಾರಿ ಅಂದಾಜುಗಳು, ಕಾಮಗಾರಿ ಆರಂಭದ ಆದೇಶ, ನೀಡಿದ ಹಾಜರಿ ಪಟ್ಟಿ ಹಾಗೂ ರಸೀದಿ ಪುಸ್ತಕ, ಮಜೂರಿ ಸಂದಾಯದ ಪುಸ್ತಕ ಮತ್ತು ಆದೇಶ, ಸಾಮಾಗ್ರಿಗಳು ಬಿಲ್‌ಗಳು ಮತ್ತು ವೋಚರ್‌ಗಳು (ಪ್ರತಿಯೊಂದು ಕಾಮಗಾರಿಗೆ) ಕಾಮಗಾರಿ ಅಳತೆ ಪುಸ್ತಕಗಳು, ಆಸ್ತಿ, ಪುಸ್ತಕ, ಹಿಂದಿನ ಸಾಮಾಜಿಕ ಲೆಕ್ಕಪರಿಶೋಧನೆಗಳ ಮೇಲೆ ಕೈಗೊಂಡ ಕ್ರಮದ ವರದಿಗಳು, ಕುಂದುಕೊರತೆಗಳು ಅಥವಾ ದೂರುಗಳ ರಿಜಿಸ್ಟರುಗಳಂತಹ ಎಲ್ಲಾ ಅನುಷ್ಠಾನ ಏಜೆನ್ಸಿಗಳ ಎಲ್ಲಾ ಅಗತ್ಯ ಮಾಹಿತಿ ಮತ್ತು ದಾಖಲೆಗಳು ಮತ್ತು ಲೆಕ್ಕಪರಿಶೋಧನಾ ಘಟಕವು ಸಾಮಾಜಿಕ ಲೆಕ್ಕಪರಿಶೋಧನಾ ಪ್ರಕ್ರಿಯೆಯನ್ನು ನಡೆಸಲು ಅಗತ್ಯವಿರುವಂಥ ಯಾವುದೇ ಇತರ ದಸ್ತಾವೇಜುಗಳು ಅಗತ್ಯ ನಮೂನೆಗಳಲ್ಲಿ ಸೂಕ್ತವಾಗಿ ತಾಳೆ ಹೊಂದುತ್ತವೆಯೇ ಮತ್ತು ಅವುಗಳನ್ನು ಛಾಯಾ ಪ್ರತಿಯೊಂದಿಗೆ ಸಾಮಾಜಿಕ ಪರಿಶೋಧನೆಯನ್ನು ನಡೆಸುವ ಗ್ರಾಮಸಭೆಯು ನಿಗದಿತ ಸಭೆಯ ದಿನಾಂಕಕ್ಕೆ ಕನಿಷ್ಠ ಹದಿನೈದು ದಿನಗಳು ಮುಂಚಿತವಾಗಿ ಸಾಮಾಜಿಕ ಪರಿಶೋಧನೆಯನ್ನು ನಡೆಸಲು ಅನುಕೂಲವಾಗುವಂತೆ ಸಾಮಾಜಿಕ ಪರಿಶೋಧನಾ ಘಟಕಕ್ಕೆ ನೀಡಲಾಗಿದೆಯೇ ಎಂಬುದನ್ನು ದೃಢಪಡಿಸುವುದು.
2. ಸಂಬಂಧಪಟ್ಟ ತಾಲ್ಲೂಕಿನ ಆರ್ಥಿಕ ವರ್ಷದ ಅವಧಿಯಲ್ಲಿ ನಡೆಸಲಾದ ಸಾಮಾಜಿಕ ಪರಿಶೋಧನಾ ನಿರ್ಣಯಗಳ ಸಾರಾಂಶವನ್ನು ಸಿದ್ಧಪಡಿಸುವುದು.
3. ಸಾಮಾಜಿಕ ಪರಿಶೋಧನೆಯ ಬಗ್ಗೆ ಕೈಗೊಂಡ ಕ್ರಮವನ್ನು ಮೇಲ್ವಿಚಾರಣೆ ಮಾಡುವುದು ಮತ್ತು ಸಂಬಂಧಪಟ್ಟ ತಾಲ್ಲೂಕಿನ ಕೈಗೊಂಡ ಕ್ರಮದ ಬಗ್ಗೆ ವರದಿಗಳನ್ನು ಸಿದ್ಧಪಡಿಸುವುದು.
4. ಪರಿಶೋಧನಾ ವರದಿಯ ಬಗ್ಗೆ ತಿದ್ದುಪಡಿ ಕ್ರಮವನ್ನು ಕೈಗೊಳ್ಳಲಾಗಿದೆಯೇ ಎಂಬುದನ್ನು ದೃಢಪಡಿಸುವುದು.

**9) ಪಂಚಾಯಿತಿ ಅಭಿವೃದ್ಧಿ ಅಧಿಕಾರಿ/ಕಾರ್ಯದರ್ಶಿಯ ಪಾತ್ರ ಮತ್ತು ಜವಾಬ್ದಾರಿ (ಇವರು ಅನುಷ್ಠಾನ ಅಧಿಕಾರಿಯಾಗಿ ಕಾರ್ಯನಿರ್ವಹಿಸುವರು)**

1. ಪಂಚಾಯಿತಿ ಅಭಿವೃದ್ಧಿ ಅಧಿಕಾರಿಯು, ಉದ್ಯೋಗ ಚೀಟಿ ರಿಜಿಸ್ಟರು, ಉದ್ಯೋಗ ರಿಜಿಸ್ಟರು, ಕಾಮಗಾರಿ ರಿಜಿಸ್ಟರು, ಗ್ರಾಮಸಭೆಯ ನಿರ್ಣಯ, ಮಂಜೂರಾತಿಯ ಪ್ರತಿಗಳು (ಆಡಳಿತಾತ್ಮಕ ಅಥವಾ ತಾಂತ್ರಿಕ ಹಣಕಾಸು) ಕಾಮಗಾರಿ ಅಂದಾಜುಗಳು, ಕಾಮಗಾರಿ ಆರಂಭದ ಆದೇಶ, ನೀಡಿದ ಹಾಜರಿ ಪಟ್ಟಿ ಮತ್ತು ರಸೀದಿ ರಿಜಿಸ್ಟರು, ಮಜೂರಿ ಸಂದಾಯದ ಪುಸ್ತಕ ಮತ್ತು ಆದೇಶ, ಸಾಮಾಗ್ರಿಗಳು–ಬಿಲ್ಲುಗಳು ಮತ್ತು ವೋಚರುಗಳು (ಪ್ರತಿಯೊಂದು ಕಾಮಗಾರಿಗೆ) ಕಾಮಗಾರಿ ಅಳತೆ ಪುಸ್ತಕ, ಆಸ್ತಿ ಪುಸ್ತಕ, ಹಿಂದಿನ ಸಾಮಾಜಿಕ ಪರಿಶೋಧನೆಗಳ ಮೇಲೆ ಕೈಗೊಂಡ ಕ್ರಮದ ವರದಿಗಳು, ಕುಂದುಕೊರತೆಗಳು ಅಥವಾ ದೂರುಗಳ ರಿಜಿಸ್ಟರುಗಳಂತಹ ಎಲ್ಲ ಅನುಷ್ಠಾನ ಏಜೆನ್ಸಿಗಳ ಎಲ್ಲಾ ಅಗತ್ಯ ಮಾಹಿತಿ ಮತ್ತು ದಾಖಲೆಗಳು ಮತ್ತು ಲೆಕ್ಕಪರಿಶೋಧನಾ ಘಟಕವು ಸಾಮಾಜಿಕ ಪರಿಶೋಧನಾ ಪ್ರಕ್ರಿಯೆಯನ್ನು ನಡೆಸಲು ಅಗತ್ಯವಿರುವಂಥ ಯಾವುದೇ ಇತರ ದಸ್ತಾವೇಜುಗಳು ಅಗತ್ಯ ನಮೂನೆಗಳಲ್ಲಿ ಸೂಕ್ತವಾಗಿ ತಾಳೆ ಹೊಂದುತ್ತವೆಯೇ ಮತ್ತು ಅವುಗಳನ್ನು ಛಾಯಾಪ್ರತಿಯೊಂದಿಗೆ ಸಾಮಾಜಿಕ ಪರಿಶೋಧನೆಯನ್ನು ನಡೆಸುವ ಗ್ರಾಮಸಭೆಯು ನಿಗದಿತ ಸಭೆಯ ದಿನಾಂಕಕ್ಕೆ ಕನಿಷ್ಠ ಹದಿನೈದು ದಿನಗಳು ಮುಂಚಿತವಾಗಿಯೇ ಸಾಮಾಜಿಕ ಪರಿಶೋಧನೆಯನ್ನು ನಡೆಸಲು ಅನುಕುಲವಾಗುವಂತೆ ಸಾಮಾಜಿಕ ಪರಿಶೋಧನಾ ಘಟಕಕ್ಕೆ ನೀಡಲಾಗಿದೆಯೇ ಎಂಬುದನ್ನು ದೃಢಪಡಿಸುವುದು.
2. ಗ್ರಾಮ ಪಂಚಾಯಿತಿಯ ಆರ್ಥಿಕ ವರ್ಷಾವಧಿಯಲ್ಲಿ ನಡೆಸಲಾದ ಪರಿಶೋಧನೆಯಲ್ಲಿ ಪತ್ತೆಯಾದ ಅಂಶಗಳ ಸಾರಾಂಶಗಳನ್ನು ಸಿದ್ಧಪಡಿಸುವುದು.
3. ಗ್ರಾಮ ಪಂಚಾಯಿತಿಯು ಕೈಗೊಂಡ ಕ್ರಮದ ವರದಿಯನ್ನು ಸಿದ್ಧಪಡಿಸುವುದು.

4. ಸಾಮಾಜಿಕ ಪರಿಶೋಧನಾ ವರದಿಯ ಆಧಾರದ ಮೇಲೆ ತಿದ್ದುಪಡಿ ಕ್ರಮಗಳನ್ನು ಕೈಗೊಳ್ಳುವುದು.
5. ಲೆಕ್ಕಪರಿಶೋಧನೆಯು ಸುಲಭವಾಗಿ ನಡೆಯಲು ಸೂಕ್ತ ವಾತಾವರಣ ನಿರ್ಮಿಸುವುದು.
6. ಸಾಮಾಜಿಕ ಪರಿಶೋಧನೆ ಮತ್ತು ಸಾರ್ವಜನಿಕ ವಿಚಾರಣೆಯ ಅವಧಿಯಲ್ಲಿ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ/ಕಾರ್ಯದರ್ಶಿಯು ಉಪಸ್ಥಿತರಿರಲು ಬದ್ಧರಾಗಿರುವುದು.
7. ಸಾಮಾಜಿಕ ಪರಿಶೋಧನೆ ಗ್ರಾಮಸಭೆಯಲ್ಲಿ ಕಾರ್ಮಿಕರ ಪೂರ್ಣ ಪ್ರಮಾಣದಲ್ಲಿ ಮುಕ್ತವಾಗಿ ಮತ್ತು ನ್ಯಾಯಯುತ ಭಾಗವಹಿಸುವಿಕೆಯನ್ನು ಖಚಿತಪಡಿಸುವುದು.

**10) ಸರ್ಕಾರೇತರ ಸಂಸ್ಥೆಗಳ ಪಾತ್ರ :**

**1. ನಿರ್ದೇಶನಾಲಯವು, ಈ ಕೆಳಕಂಡ ವಿಷಯಗಳ ಮೇಲೆ ಸರ್ಕಾರೇತರ ಸಂಸ್ಥೆಗಳು ತೊಡಗುವಿಕೆಯ ಸಾಧ್ಯತೆಗಳನ್ನು ಪರಿಶೀಲಿಸುವುದು:**

ಎ) ಸಾಮರ್ಥ್ಯಾಭಿವೃದ್ಧಿ.

ಬಿ) ಗ್ರಾಮಸಭೆ ಮತ್ತು ಸಾರ್ವಜನಿಕ ವಿಚಾರಣೆಗಳು ನಡೆಯಲು ಅನುಕೂಲ ಮಾಡಿಕೊಡುವುದು.

ಸಿ) ಸ್ವತಂತ್ರ್ಯ ಪರಿವೀಕ್ಷಕರಾಗಿ ನಿರ್ವಹಿಸುವುದು.

ಡಿ) ಫಲಾನುಭವಿಗಳ ತರಬೇತಿಯ ಅಗತ್ಯತೆಯನ್ನು ಗುರುತಿಸುವುದು.

ಇ) ಪ್ರಚಾರ.

**2) ಸರ್ಕಾರೇತರ ಸಂಸ್ಥೆಗಳನ್ನು ತೊಡಗಿಸಿಕೊಳ್ಳಲು ಅವುಗಳನ್ನು ಗುರುತಿಸುವಲ್ಲಿ ನಿರ್ದೇಶನಾಲಯವು ಸಾಮಾನ್ಯ ಮಾರ್ಗಸೂಚಿಗಳನ್ನು ಹೊರತರತಕ್ಕದ್ದು.**

## IV. ಸಾಮಾಜಿಕ ಪರಿಶೋಧನೆಯ ಅವಧಿ:

ಅಧಿನಿಯಮದ ಅಡಿಯಲ್ಲಿ ತೆಗೆದುಕೊಂಡ ಕಾಮಗಾರಿಗಳನ್ನು ಪ್ರತಿ ಗ್ರಾಮ ಪಂಚಾಯಿತಿಯಲ್ಲಿ ಕನಿಷ್ಠ ಆರು ತಿಂಗಳಿಗೊಮ್ಮೆ ಈ ನಿಯಮಗಳ ಮೇರೆಗೆ ನಿಗದಿಪಡಿಸಿದ ರೀತಿಯಲ್ಲಿ ನಿರ್ವಹಿಸಲು ಸಾಮಾಜಿಕ ಪರಿಶೋಧನೆಯು ಅನುಕೂಲ ಮಾಡಿಕೊಡುತ್ತದೆ.

1) ಏಪ್ರಿಲ್‌ನಿಂದ ಪ್ರಾರಂಭಗೊಂಡು ಸೆಪ್ಟಂಬರ್‌ವರೆಗೆ ಇದ್ದಂಥ ಅವಧಿಗಾಗಿ ಆ ಆರ್ಥಿಕ ವರ್ಷದ ಅವಧಿಯಲ್ಲಿ ಭರಿಸಿದ ವೆಚ್ಚವು ಅಕ್ಟೋಬರ್‌ನಿಂದ ಪ್ರಾರಂಭಗೊಂಡು ಮಾರ್ಚ್‌ವರೆಗಿನ ಅವಧಿಯಲ್ಲಿ ನಡೆಸುವ ಸಾಮಾಜಿಕ ಪರಿಶೋಧನೆಗೆ ಒಳಪಡತಕ್ಕದ್ದು.

2) ಅಕ್ಟೋಬರ್‌ನಿಂದ ಪ್ರಾರಂಭಗೊಂಡು ಮಾರ್ಚ್‌ವರೆಗೆ ಇದ್ದಂಥ ಅವಧಿಗಾಗಿ ಆ ಆರ್ಥಿಕ ವರ್ಷದಲ್ಲಿ ಭರಿಸಿದ ವೆಚ್ಚವು ಏಪ್ರಿಲ್‌ನಿಂದ ಪ್ರಾರಂಭಗೊಂಡು ಸೆಪ್ಟಂಬರ್‌ವರೆಗಿನ ಅವಧಿಯಲ್ಲಿ ನಡೆಸುವ ಸಾಮಾಜಿಕ ಲೆಕ್ಕಪರಿಶೋಧನೆಗೆ ಒಳಪಡತಕ್ಕದ್ದು.

3) ತದನುಸಾರವಾಗಿ, ನಿರ್ದೇಶಕರು, ಆರ್ಥಿಕ ವರ್ಷದ ಆರಂಭದಲ್ಲಿಯೇ ಸಾಮಾಜಿಕ ಪರಿಶೋಧನೆ ವಾರ್ಷಿಕ ವೇಳಾ ಪಟ್ಟಿ ಸಿದ್ಧಪಡಿಸುವುದು.

## V. ಸಾಮಾಜಿಕ ಪರಿಶೋಧನಾ ಸೌಲಭ್ಯ:

ಸಾಮಾಜಿಕ ಪರಿಶೋಧನಾ ಘಟಕವು ಈ ಮುಂದಿನವುಗಳಿಗೆ ಜವಾಬ್ದಾರವಾಗಿರುತ್ತದೆ. ಅವು ಯಾವುವೆಂದರೆ:–

ಎ) ಸಾಮಾಜಿಕ ಪರಿಶೋಧನೆಯನ್ನು ನಡೆಸುವುದಕ್ಕಾಗಿ ಗ್ರಾಮಸಭೆಗಳು ಸಾಮರ್ಥ್ಯಗಳನ್ನು ಹೆಚ್ಚಿಸುವುದು ಮತ್ತು ಈ ಉದ್ದೇಶಕ್ಕಾಗಿ ಗ್ರಾಮ, ಕ್ಷೇತ್ರ, ಜಿಲ್ಲೆ ಮತ್ತು ರಾಜ್ಯಮಟ್ಟದಲ್ಲಿ ಜನರ ಹಕ್ಕುಗಳಿಗಾಗಿ ಹೋರಾಡುವ ಅನುಭವ ಮತ್ತು ಜ್ಞಾನವಿರುವಂಥ ಮುಖ್ಯ ಮಧ್ಯಸ್ಥಗಾರರು ಮತ್ತು ಇತರೆ ನಾಗರಿಕ ಸಂಘ ಸಂಸ್ಥೆಗಳಿಂದ ತೆಗೆದುಕೊಂಡಂತ ಸೂಕ್ತ ಸಂಪನ್ಮೂಲ ವ್ಯಕ್ತಿಗಳನ್ನು ಗುರುತಿಸುವುದು, ತರಬೇತಿ ನೀಡುವುದು ಮತ್ತು ನಿಯೋಜಿಸುವುದು.

ಬಿ) ಸಾಮಾಜಿಕ ಪರಿಶೋಧನಾ ಪ್ರಕ್ರಿಯೆಗಾಗಿ ಸಾಮಾಜಿಕ ಪರಿಶೋಧನಾ ವರದಿಯ ನಮೂನೆಗಳು, ಸಂಪನ್ಮೂಲ ಸಾಮಗ್ರಿ, ಮಾರ್ಗಸೂಚಿಗಳು ಮತ್ತು ಕೈಪಿಡಿಗಳನ್ನು ಸಿದ್ಧಪಡಿಸುವುದು.

ಸಿ) ಅಧಿನಿಯಮದ ಅಡಿಯಲ್ಲಿ ಕಾರ್ಮಿಕರಿಗೆ ಅವರ ಹಕ್ಕುಗಳು ಮತ್ತು ಅರ್ಹತೆಗಳ ಬಗ್ಗೆ ಅರಿವನ್ನು ಮೂಡಿಸುವುದು.

ಡಿ) ಪ್ರಾಥಮಿಕ ಫಲಾನುಭವಿಗಳೊಂದಿಗೆ ಕಾಮಗಾರಿ ಸ್ಥಳಗಳು ಮತ್ತು ದಾಖಲೆಗಳನ್ನು ಪರಿಶೀಲಿಸಲು ಸಹಕರಿಸುವುದು.

ಇ) ಸಾಮಾಜಿಕ ಪರಿಶೋಧನಾ ಗ್ರಾಮಸಭೆಗಳಲ್ಲಿ ಸಾಮಾಜಿಕ ಪರಿಶೋಧನಾ ವರದಿಗಳನ್ನು ಓದುವುದು, ಯುಕ್ತ ಚರ್ಚೆಯನಂತರ ತೀರ್ಮಾನ ತೆಗೆದುಕೊಳ್ಳುವುದು ಮತ್ತ ಸುಗಮವಾಗಿ ಗ್ರಾಮ ಸಭೆ ನಡೆಯಲು ಅನುವು ಮಾಡುವುದು.

ಎಫ್) ಸಾಮಾಜಿಕ ಪರಿಶೋಧನಾ ವರದಿಗಳನ್ನು ಕ್ರಮಕೈಗೊಂಡ ವರದಿಯೊಂದಿಗೆ ಸಾರ್ವಜನಿಕ ಮಾಹಿತಿ ಕೋಶದಲ್ಲಿ ಪ್ರಕಟಿಸುವುದು.

**VI. ಸಾಮಾಜಿಕ ಪರಿಶೋಧನೆಯನ್ನು ನಡೆಸುವ ಪ್ರಕ್ರಿಯೆಗಳು:**

1) ಸಾಮಾಜಿಕ ಪರಿಶೋಧನಾ ಘಟಕವು ವರ್ಷದ ಪ್ರಾರಂಭದಲ್ಲಿ ಪ್ರತಿ ಆರು ತಿಂಗಳುಗಳಿಗೊಮ್ಮೆ ಪ್ರತಿಯೊಂದು ಗ್ರಾಮ ಪಂಚಾಯಿತಿಗಳಲ್ಲಿ ಕನಿಷ್ಟ ಒಂದು ಸಾಮಾಜಿಕ ಪರಿಶೋಧನೆಯನ್ನು ನಡೆಸಲು ವಾರ್ಷಿಕ ವೇಳಾಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ವೇಳಾಪಟ್ಟಿಯ ಒಂದು ಪ್ರತಿಯನ್ನು ಸೂಕ್ತ ಏರ್ಪಾಡುಗಳನ್ನು ಮಾಡಲು ಎಲ್ಲಾ ಜಿಲ್ಲಾ ಕಾರ್ಯಕ್ರಮ ಸಮನ್ವಯಗಾರರಿಗೆ ಕಳುಹಿಸತಕ್ಕದ್ದು.

2) ಸಾಮಾಜಿಕ ಪರಿಶೋಧನಾ ಘಟಕವು ನಿಯೋಜಿಸಿದ ಸಂಪನ್ಮೂಲ ವ್ಯಕ್ತಿಗಳು, ಈ ಯೋಜನೆಯ ಪ್ರಾಥಮಿಕ ಫಲಾನುಭವಿಗಳೊಂದಿಗೆ ಸಾಮಾಜಿಕ ಪರಿಶೋಧನೆಯ ಗ್ರಾಮಸಭೆ ನಡೆಸಲು ಅನುಕೂಲ ಮಾಡಿಕೊಡುವುದಕ್ಕಾಗಿ ಈ ಮುಂದಿನವುಗಳನ್ನು ಪರಿಶೀಲಿಸತಕ್ಕದ್ದು.

   i) ಹಾಜರಿಪಟ್ಟಿಯಲ್ಲಿ ಹೆಸರುಗಳು ನಮೂದಾಗಿರುವ ಮಜೂರಿ ಕೋರುವವರನ್ನು ಸಂಪರ್ಕಿಸುವುದರ ಮೂಲಕ ನಿರ್ದಿಷ್ಟ ಕಾಲಾವಧಿಯಲ್ಲಿ ಮಾಡಿದ ಹಾಜರಿಪಟ್ಟಿ ನಮೂದು ಮತ್ತು ಸಂದಾಯಗಳು:

   ii) ಕಾಮಗಾರಿಯ ಸ್ಥಳ ಮತ್ತು ದಾಖಲೆಗಳ ಆಧಾರದ ಮೇಲೆ ಗುಣಮಟ್ಟ ನಿರ್ಧರಣೆ ಮತ್ತು ಮಾಡಲಾದ ಕಾಮಗಾರಿಗಳ ಗುಣಮಟ್ಟ;

   iii) ಹಣಕಾಸು ವರದಿಯ ನೈಜತೆ ಮತ್ತು ವಿಶ್ವಾಸಾರ್ಹತೆಯನ್ನು ಪರಿಶೀಲಿಸಿದಂಥ ನಗದು ಪುಸ್ತಕ, ಬ್ಯಾಂಕು ವಿವರಣ ಪಟ್ಟಿ ಮತ್ತು ಇತರೆ ಹಣಕಾಸು ದಾಖಲೆಗಳು.

   iv) ಸಂಗ್ರಹಣೆ ಅಂದಾಜು ಮತ್ತು ರೂಪಿಸಿದ ಪ್ರಕ್ರಿಯೆ ಪ್ರಕಾರ ಸಂಗ್ರಹಣೆಗಳನ್ನು ಮತ್ತು ಅವುಗಳ ಆರ್ಥಿಕವಾಗಿ ಸೂಕ್ತವಾಗಿವೆಯೇ ಎಂಬುದನ್ನು ಪರೀಕ್ಷಿಸಲು ಸಾಮಗ್ರಿಗಳ ಸಂಗ್ರಹಣೆಗಾಗಿ ಬಳಸಲಾದ ಸರಕು ಪಟ್ಟಿಗಳು, ಬಿಲ್ಲುಗಳು, ವೋಚರುಗಳು ಮತ್ತು ಇತರೆ ಸಂಬಂಧಿತ ದಾಖಲೆಗಳು:

   v) ಈ ಯೋಜನೆಯ ನಿಧಿಗಳಿಂದ ಅನುಷ್ಠಾನ ಏಜೆನ್ಸಿಗಳು ಮಾಡಿದಂಥ ಯಾವುದೇ ಇತರೆ ಸಂದಾಯಗಳು.

3) ಸಂಪನ್ಮೂಲ ವ್ಯಕ್ತಿಗಳು ಮತ್ತು ಕಾರ್ಯಕ್ರಮ ಅಧಿಕಾರಿಗಳು ಗ್ರಾಮ ಸಭೆ ನಡೆಸುವ ಸಾಮಾಜಿಕ ಪರಿಶೋಧನೆಯನ್ನು ಕಾರ್ಮಿಕರು ಮತ್ತು ಗ್ರಾಮ ಸಮುದಾಯಗಳಿಗೆ ತಿಳಿಸುವುದು ಮತ್ತು ಅವರು ಪೂರ್ಣವಾಗಿ ಭಾಗಿಯಾಗುವುದನ್ನು ಖಚಿತಪಡಿಸುವುದು.

4) ಸಾಮಾಜಿಕ ಪರಿಶೋಧನೆಯಲ್ಲಿ ಕಂಡು ಹಿಡಿದ ಅಂಶಗಳ ಪರಿಶೀಲನೆ ವರದಿಗಳ ಪಾರದರ್ಶಕತೆ ಮತ್ತು ಉತ್ತರದಾಯಿತ್ವಗಳ ಪುನರ್ವಿಮರ್ಶೆ, ಕಾರ್ಮಿಕರ ಹಕ್ಕುಗಳು ಮತ್ತು ಅರ್ಹತೆಗಳ ಈಡೇರಿಕೆ, ನಿಧಿಗಳ ಸೂಕ್ತ ಬಳಕೆ ಬಗ್ಗೆ ಸಾಮಾಜಿಕ ಪರಿಶೋಧನಾ ಪ್ರಕ್ರಿಯೆಯನ್ನು ನಡೆಸಲು ಒಂದು ಗ್ರಾಮಸಭೆಯನ್ನು ನಡೆಸುವುದು.

5) ಮಾಹಿತಿಗಳನ್ನು ಸಂಗ್ರಹಿಸುವುದು ಮತ್ತು ನಿಗದಿಪಡಿಸಲಾದ ನಮೂನೆಯಲ್ಲಿ ಸಿದ್ಧಪಡಿಸಿದ ಮಾಹಿತಿಗಳನ್ನು ಓದುವುದು.

**VII. ಗ್ರಾಮಸಭೆಯ ಸಾಮಾಜಿಕ ಪರಿಶೋಧನೆ:**

**ಗ್ರಾಮ ಪಂಚಾಯಿತಿಯಲ್ಲಿ ಸಾಮಾಜಿಕ ಪರಿಶೋಧನೆಯು 6 ದಿನಗಳ ಕಾಲ ನಡೆಯುತ್ತದೆ.**

| | | |
|---|---|---|
| **ಒಂದನೇ ದಿನ** | : | ತಾಲ್ಲೂಕು ಸಂಪನ್ಮೂಲ ವ್ಯಕ್ತಿಗಳಿಂದ ಗ್ರಾಮ ಪಂಚಾಯಿತಿ ಸಂಪನ್ಮೂಲ ವ್ಯಕ್ತಿಗಳಿಗೆ ತರಬೇತಿ. |
| **ಎರಡನೇ ದಿನ** | : | ಗ್ರಾಮ ಪಂಚಾಯಿತಿ ಸಂಪನ್ಮೂಲ ವ್ಯಕ್ತಿಗಳು ಮನೆಯಿಂದ ಮನೆಗೆ ಸಮೀಕ್ಷೆಯನ್ನು ನಡೆಸುವುದು ಮತ್ತು ಉದ್ಯೋಗ ಚೀಟಿಯ ಪ್ರಕಾರ ವಿವರಗಳು ಮತ್ತು ಸಂದಾಯವನ್ನು ಪರಿಶೀಲಿಸುವುದು ಮತ್ತು ಇತರೆ ಮಾಹಿತಿಯನ್ನು ಸಂಗ್ರಹಿಸುವುದು. |
| **ಮೂರು ಮತ್ತು ನಾಲ್ಕನೇ ದಿನ** | : | ವಾಸ್ತವಾಗಿ ಕಾಮಗಾರಿಗಳ ಪರಿವೀಕ್ಷಣೆ ಮತ್ತು ಗುಣಮಟ್ಟ ವೀಕ್ಷಣೆ ಮತ್ತು ಕಾಮಗಾರಿ ಸ್ಥಳದಲ್ಲಿನ ಸೌಕರ್ಯಗಳನ್ನು ಗಮನಿಸುವುದು. |
| **ಐದನೇ ದಿನ** | : | ವರದಿಯನ್ನು ತಯಾರಿಸುವುದು. |
| **ಆರನೇ ದಿನ** | : | ಗ್ರಾಮ ಸಭೆ ಮತ್ತು ಸಾರ್ವಜನಿಕ ವಿಚಾರಣೆ. |

- ➢ ಸಾಮಾಜಿಕ ಪರಿಶೋಧನೆಯ ಅಂತ್ಯದಲ್ಲಿ ಸಾಮಾಜಿಕ ಪರಿಶೋಧನೆಯಲ್ಲಿ ಪತ್ತೆಯಾದ ಅಂಶಗಳ ಚರ್ಚೆಗಾಗಿ ಗ್ರಾಮಸಭೆಯಲ್ಲಿ ಮಂಡಿಸುವುದು. ಗ್ರಾಮಸಭೆಯಲ್ಲಿ ಸಾರ್ವಜನಿಕ ವಿಚಾರಣೆಗಳನ್ನು ನಡೆಸತಕ್ಕದ್ದು.
- ➢ ಗ್ರಾಮ ಸಭೆಯ ಪ್ರಕ್ರಿಯೆಯನ್ನು ವೀಡಿಯೋ ಮೂಲಕ ಚಿತ್ರೀಕರಣ ಮಾಡುವುದು.

- ಸಾಮಾಜಿಕ ಪರಿಶೋಧನೆಯ ಗ್ರಾಮ ಸಭೆಯು, ಕೆಪಿಆರ್ ಅಧಿನಿಯಮ, 1993ರ ಮೇರೆಗೆ ಪರಿಭಾಷಿಸಿದಂತ, ಗ್ರಾಮಸಭೆಗಿಂತ ಸಂಪೂರ್ಣವಾಗಿ ಭಿನ್ನವಾಗಿರುತ್ತದೆ ಮತ್ತು ಆ ಸಭೆಯ ಅಧ್ಯಕ್ಷತೆಯನ್ನು ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಅಧಿಸೂಚಿಸಿದ ಅಧಿಕಾರಿಯು ವಹಿಸತಕ್ಕದ್ದು. ಆದರೆ ಅದೇ ಅಧಿಕಾರಿಯನ್ನು ಅದೇ ಗ್ರಾಮ ಪಂಚಾಯತಿಯಲ್ಲಿ ನಡೆಯುವ ಮುಂದಿನ ಸಾಮಾಜಿಕ ಪರಿಶೋಧನೆಯ ಗ್ರಾಮ ಸಭೆಗೆ ಅಧ್ಯಕ್ಷತೆ ವಹಿಸುವಂತೆ ನಿಯೋಜಿಸತಕ್ಕದ್ದಲ್ಲ.
- ಅಧ್ಯಕ್ಷತೆ ವಹಿಸುವ ವ್ಯಕ್ತಿಯು, ಮೇಲ್ನೋಟಕ್ಕೆ ಕಂಡುಬರುವ ಮೋಸ / ದುರುಪಯೋಗದ ಪ್ರಕರಣಗಳನ್ನು ಗ್ರಾಮ ಸಭೆಯ ಒಪ್ಪಿಗೆಯೊಂದಿಗೆ ಓಂಬುಡ್ಸ್‌ಮೆನ್‌ಗೆ ವಹಿಸಬಹುದು. ಓಂಬುಡ್ಸ್‌ಮೆನ್‌ರವರು ನಿಯಮಾನುಸಾರ ಪ್ರಕರಣಗಳನ್ನು ಇತ್ಯರ್ಥ/ ವಿಲೆ ಮಾಡತಕ್ಕದ್ದು.

**VIII. ಸಾಮಾಜಿಕ ಪರಿಶೋಧನೆಗೆ ಸಂಬಂಧಿಸಿದಂತೆ ಕೆಲವು ವ್ಯಕ್ತಿಗಳ ಹೊಣೆ.**

1) ಕಾರ್ಯಕ್ರಮ ಅಧಿಕಾರಿಯು, ಉದ್ಯೋಗ ಚೀಟಿ ರಿಜಿಸ್ಟರ್, ಉದ್ಯೋಗ ರಿಜಿಸ್ಟರು, ಕಾಮಗಾರಿ ರಿಜಿಸ್ಟರು, ಗ್ರಾಮಸಭೆ ನಿರ್ಣಯ, ಮಂಜೂರಾತಿಯ ಪ್ರತಿಗಳು (ಆಡಳಿತಾತ್ಮಕ ಅಥವಾ ತಾಂತ್ರಿಕ ಅಥವಾ ಹಣಕಾಸು), ಕಾಮಗಾರಿ ಅಂದಾಜುಗಳು, ಕಾಮಗಾರಿ ಆರಂಭದ ಆದೇಶ ನೀಡಿದ ಹಾಜರಿ ಪಟ್ಟಿ ಮತ್ತು ಸ್ವೀಕೃತಿ ಪುಸ್ತಕ, ಮಜೂರಿ ಸಂದಾಯದ ಪುಸ್ತಕ ಮತ್ತು ಆದೇಶ, ಸಾಮಗ್ರಿಗಳು–ಬಿಲ್ಲುಗಳು ಮತ್ತು ವೋಚರುಗಳು (ಪ್ರತಿ ಕಾಮಗಾರಿಗಾಗಿ) ಕಾಮಗಾರಿ ಅಳತೆ ಪುಸ್ತಕಗಳು (ಪ್ರತಿ ಕಾಮಗಾರಿಗಾಗಿ). ಆಸ್ತಿ ಪುಸ್ತಕ, ಹಿಂದಿನ ಸಾಮಾಜಿಕ ಪರಿಶೋಧನೆಗಳ ಮೇಲೆ ಕೈಗೊಂಡ ಕ್ರಮದ ವರದಿ, ಕುಂದುಕೊರತೆ ಅಥವಾ ದೂರುಗಳ ರಿಜಿಸ್ಟರುಗಳಂತಹ ಎಲ್ಲಾ ಅನುಷ್ಠಾನ ಏಜೆನ್ಸಿಗಳ ಎಲ್ಲಾ ಅಗತ್ಯ ಮಾಹಿತಿ ಮತ್ತು ದಾಖಲೆಗಳು ಮತ್ತು ಪರಿಶೋಧನಾ ಘಟಕವು ಸಾಮಾಜಿಕ ಪರಿಶೋಧನಾ ಪ್ರಕ್ರಿಯೆಯನ್ನು ನಡೆಸಲು ಅಗತ್ಯವಿರುವಂಥ ಯಾವುದೇ ಇತರೆ ದಸ್ತಾವೇಜುಗಳು ಅಗತ್ಯ ನಮೂನೆಗಳಲ್ಲಿ ಸೂಕ್ತವಾಗಿ ತಾಳೆ ಹೊಂದುತ್ತವೆಯೇ ಮತ್ತು ಅವುಗಳನ್ನು ಛಾಯಾ ಪ್ರತಿಗಳೊಂದಿಗೆ ಸಾಮಾಜಿಕ ಪರಿಶೋಧನೆಯನ್ನು ನಡೆಸುವ ಗ್ರಾಮಸಭೆಯ ನಿಗದಿತ ಸಭೆಯ ದಿನಾಂಕಕ್ಕೆ ಕನಿಷ್ಠ ಹದಿನೈದು ದಿನಗಳು ಮುಂಚಿತವಾಗಿಯೇ ಸಾಮಾಜಿಕ ಪರಿಶೋಧನೆಯನ್ನು ನಡೆಸಲು ಅನುಕೂಲವಾಗುವಂತೆ ಸಾಮಾಜಿಕ ಪರಿಶೋಧನಾ ಘಟಕಕ್ಕೆ ನೀಡಲಾಗಿದೆಯೇ ಎಂಬುದನ್ನು ದೃಢಪಡಿಸುವುದು.

2) (1)ನೇ ಉಪ–ಪ್ರಕರಣದಲ್ಲಿ ಉಲ್ಲೇಖಿಸಲಾದ ಮಾಹಿತಿಯು ಅದೇ ಸಮಯಕ್ಕೆ ಸಾರ್ವಜನಿಕರಿಗೆ ಲಭ್ಯವಾಗತಕ್ಕದ್ದು ಮತ್ತು ಛಾಯಾಪ್ರತಿಗಳು ನಾಮಮಾತ್ರ ವೆಚ್ಚಕ್ಕೆ ಲಭ್ಯವಾಗತಕ್ಕದ್ದು.

3) ಪ್ರತಿ ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಅಥವಾ ಅವರ ಪರವಾಗಿ ಯಾವುದೇ ಅಧಿಕಾರಿಯು–

ಎ. ಕಾರ್ಯಕ್ರಮ ಅಧಿಕಾರಿಯ ಮೂಲಕ ಅನುಷ್ಠಾನ ಏಜೆನ್ಸಿಗಳಿಂದ ಸಾಮಾಜಿಕ ಪರಿಶೋಧನೆ ನಡೆಸಲು ಎಲ್ಲಾ ದಾಖಲೆಗಳನ್ನು ಸಾಮಾಜಿಕ ಪರಿಶೋಧನಾ ಘಟಕಕ್ಕೆ ಒದಗಿಸಲಾಗಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

ಬಿ. ಸಾಮಾಜಿಕ ಪರಿಶೋಧನಾ ವರದಿಯ ಮೇಲೆ ಸರಿಯಾದ ಕ್ರಮ ತೆಗೆದುಕೊಳ್ಳಲಾಗಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

ಸಿ. ಹಣ ದುರುಪಯೋಗವಾದ ಅಥವಾ ಅನುಚಿತವಾಗಿ ಬಳಸಿದ ಮೊತ್ತವನ್ನು ವಸೂಲಿ ಮಾಡುವುದಕ್ಕೆ ಕ್ರಮಗಳನ್ನು ತೆಗೆದುಕೊಳ್ಳುವುದು; ಮತ್ತು ಹಾಗೆ ವಸೂಲು ಮಾಡಲಾದ ಮೊತ್ತಕ್ಕಾಗಿ ಹಿಂಬರಹ ಅಥವಾ ಸ್ವೀಕೃತಿಯನ್ನು ನೀಡತಕ್ಕದ್ದು.

ಡಿ. ದುರುಪಯೋಗವಾಗಿದೆ ಎಂದು ಕಂಡುಬಂದ ಮಜೂರಿಗಳನ್ನು ಅಂಥ ಮೊತ್ತವನ್ನು ವಸೂಲು ಮಾಡಿದ ಏಳು ದಿನಗಳ ಒಳಗೆ ಮಂಜೂರು ಕೋರುವವರಿಗೆ ನೀಡತಕ್ಕದ್ದು.

ಇ. ಸಾಮಾಜಿಕ ಪರಿಶೋಧನಾ ಪ್ರಕ್ರಿಯೆಗಳ ಅವಧಿಯಲ್ಲಿ ವಸೂಲಾದ ಮೊತ್ತಕ್ಕಾಗಿ ಪ್ರತ್ಯೇಕ ಖಾತೆಯನ್ನು ನಿರ್ವಹಿಸಬೇಕು.

**ಎಫ್**. ಈ ಅಧಿನಿಯಮದ ಮೇರೆಗೆ ಯೋಜನೆಗಳಿಗೆ ಮೀಸಲಿರಿಸಿದ ಮೊತ್ತವನ್ನು ದುರ್ಬಳಕೆ ಮಾಡಿದ ಅಥವಾ ದುರುಪಯೋಗ ಮಾಡಿದ ವ್ಯಕ್ತಿಗಳು ಅಥವಾ ಸಮೂಹಗಳ ವಿರುದ್ಧ ಸೂಕ್ತ ಕ್ರಮವನ್ನು ತೆಗೆದುಕೊಳ್ಳ ಲಾಗಿದೆಯೇ ಎಂಬುದನ್ನು ಖಚಿತಪಡಿಸತಕ್ಕದ್ದು (ಕ್ರಿಮಿನಲ್ ಅಥವಾ ಸಿವಿಲ್ ವ್ಯವಹರಣೆಗಳನ್ನು ಕೈಗೊಳ್ಳುವುದು ಅಥವಾ ಸೇವೆಯಿಂದ ಬಿಡುಗಡೆಗೊಳಿಸುವುದು ಒಳಗೊಳ್ಳುತ್ತದೆ).

**IX. ಸಾಮಾಜಿಕ ಪರಿಶೋಧನೆಯ ತದನಂತರದ ಪ್ರಕ್ರಿಯೆಗಳು**

ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮದ ಪ್ರಕರಣ ಸಂ.14(3) (ಇ) ಮತ್ತು 15(5)ಡಿ ಪ್ರಕಾರ ಸಾಮಾಜಿಕ ಪರಿಶೋಧನಾ ಗ್ರಾಮಸಭೆಯ ನಿರ್ಣಯಗಳ ಮೇಲೆ ಮುಂದಿನ ಕ್ರಮವನ್ನು ಕೈಗೊಳ್ಳಲು ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಮತ್ತು ಕಾರ್ಯಕ್ರಮ ಅಧಿಕಾರಿಗಳು ಜವಾಬ್ದಾರರಾಗಿರುತ್ತಾರೆ.

1) ತಾಲ್ಲೂಕು ಸಾಮಾಜಿಕ ಪರಿಶೋಧನಾ ಸಂಪನ್ಮೂಲ ವ್ಯಕ್ತಿಗಳಿಂದ ಎಂಐಎಸ್‌ನಲ್ಲಿ ಸಾಮಾಜಿಕ ಪರಿಶೋಧನಾ ವರದಿಗಳನ್ನು ತಹಲ್‌ವರೆಗೆ ಪರಿಷ್ಕರಿಸತಕ್ಕದ್ದು.

2) ತಾಲ್ಲೂಕು ಸಂಪನ್ಮೂಲ ವ್ಯಕ್ತಿಯು ಸಾಮಾಜಿಕ ಪರಿಶೋಧನಾ ವರದಿಗಳನ್ನು ಕಾರ್ಯಕ್ರಮ ಅಧಿಕಾರಿ, ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಗಳು, ಜಿಲ್ಲಾ / ರಾಜ್ಯ ಮಟ್ಟದ ಸಂಪನ್ಮೂಲ ವ್ಯಕ್ತಿಗಳಿಗೆ ಸಲ್ಲಿಸಬೇಕು.

3) ಸಾಮಾಜಿಕ ಪರಿಶೋಧನೆಯ ಮೇಲೆ ಅನುಸರಣಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

4) ಕೈಗೊಂಡ ಕ್ರಮದ ವರದಿಯನ್ನು ಮುಂದಿನ ಸಾಮಾಜಿಕ ಪರಿಶೋಧನೆಯಲ್ಲಿ ಮಂಡಿಸತಕ್ಕದ್ದು.

5) ನಿರ್ದೇಶನಾಲಯವು, ಗ್ರಾಮಸಭೆಯ ನಿರ್ಣಯಗಳು ಮತ್ತು ಪ್ರತಿಯೊಂದು ಗ್ರಾಮಸಭೆಯು ಸಾರ್ವಜನಿಕ ವಿಚಾರಣೆಯನ್ನು ನಿಗದಿತ ನಮೂನೆಯಲ್ಲಿ ಅಧಿಕೃತ ಜಾಲತಾಣದಲ್ಲಿ ಪ್ರಕಟಿಸತಕ್ಕದ್ದು.

6) ಸಂಬಂಧಪಟ್ಟ ಪ್ರಾಧಿಕಾರವು ಸಾಮಾಜಿಕ ಪರಿಶೋಧನೆಯ ವರದಿಗಳ ಮೇಲೆ ಕೈಗೊಂಡ ಕ್ರಮದ ವರದಿಯನ್ನು ಜಾಲತಾಣಕ್ಕೆ ಆರೋಹಣ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ. ಅಮಿತಾ ಪ್ರಸಾದ್,**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಪಿ.ಆರ್. 369**

## FOREST, ECOLOGY AND ENVIRONMENT SECRETARIAT

### NOTIFICATION

**No. FEE 366 FNG 2010, Bangalore, dated: 25-05-2012**

The draft of the following rules further to amend the Karnataka Forest Department Services (Recruitment) Rules, 2003 which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act for the information of persons likely to be affected thereby consideration after fifteen days from the date of its publication in the Official Gazette.

Any objection or suggestion, which may be received by the State Government from any person, with respect to the said draft before the expiry of the period specified above will be considered by the State Government. Objections and suggestions may be addressed to the Additional Chief Secretary to Government, Forest, Environment and Ecology Department, Room No. 448, 4th floor, M.S. Building, Bangalore – 500 001.

### DRAFT RULES

1. **Title and commencement:** (1) These rules may be called Karnataka Forest Department Services (Recruitment) (Amendment) Rules, 2012.

(2) They shall come into force on the date of their publication in the Official Gazette.

2. **Amendment of Schedule-II:** In the Schedule II to the Karnataka Forest Department Services (Recruitment) Rules 2003, in SCHEDULE II, -

(1) For the entries relating to the category of post of “Assistant Conservator of Forest” at serial No. 8, the following shall be substituted, namely:-

| Sl. No. | Category of post | Method of recruitment | Minimum qualification |
|---|---|---|---|
| (1) | (2) | (3) | (4) |
| 8. | Assistant Conservator of Forests<br><br>**(Old Scale)**<br><br>(14050-350-14400-400-16800-450-19500-525-22650-600-25050)<br><br>**(New Scale)**<br><br>(28100-700-28800-800-33600-900-39000-1050-45300-1200-50100) | Seventy five percent by promotion from the cadre of Range Forest Officer and twenty five percent by direct recruitment. From out of the twenty five percent direct recruitment quota, fifty percent shall be filled by the holders of Bachelor of Science in Forestry and remaining fifty percent shall be filled by the holders of Bachelor degree in science and Bachelor degree in engineering. (as specified in column 4 under the heading "For direct recruitment" in item (2)]<br><br>**Method of Direct Recruitment.-** The State Government shall notify to Karnataka Public Service Commission about the number of ACFs to be recruited in each occasion. The KPSC shall function as the Recruiting Authority.<br><br>(a) The Method of recruitment shall be as follows:-<br><br>There shall be a common preliminary examination conducted by the Karnataka Public Service Commission consisting of the following papers.<br>(i) General Knowledge - 100 marks<br>(ii) Aptitude Test - 100 marks<br><br>Candidates qualified in the preliminary examination in the ratio of 1:10 (Vacancy : Qualified candidates from preliminary exam), based on the merit and reservation shall have to appear for the main examination consisting of the following papers.<br><br>**Compulsory Papers:-**<br>(i) Kannada - 100 Marks (Qualifying, with minimum 35%)<br>(ii) English - 100 Marks (Qualifying, with minimum 35%)<br><br>**Optional papers:-**<br>(i) Forestry - Paper I 100 Marks<br>(ii) Forestry - Paper II 100 Marks<br><br>or any two papers out of the following of 100 marks each:<br>(a) Botany<br>(b) Zoology | **For Promotion:-** Must have put in a service of not less than eight years in the cadre of Range Forest Officer. On promotion as Assistant Conservator of Forests they have to undergo promotion linked training for 6 weeks within one year of service, failing which they will not be confirmed as Assistant Conservator of Forests. However this is subject to nomination to such course.<br><br>**For direct recruitment:-**<br><br>**(1) For B.Sc. Forestry Graduates:** Must be holder of a degree in Bachelor of Science in Forestry from a recognized university.<br><br>**(2) For Science and Engineering Graduates:** Must be holder of Bachelor of Science degree in Agriculture or Horticulture or Veterinary Science or Bachelor of Science degree with two or more of the following subjects namely, Mathematics, Physics, Chemistry, Zoology, Botany, Bio-Chemistry, Micro-biology, Bio-Technology or a holder of Bachelor of Engineering degree in any recognized university.<br><br>(3) The minimum marks obtained in these degree courses shall not be less than fifty percent of the maximum marks.<br><br>(4) Notwithstanding anything contained in rule 6 of the Karnataka Civil Services (General Recruitment) Rules, 1977, candidates must have attained the age of eighteen years on the date of notification and must not have attained the age of,-<br><br>(i) Thirty five years in the case of persons belonging to the Scheduled Castes or Scheduled Tribes or Category-I of other Backward Classes;<br><br>(ii) Thirty three years in the case of persons belonging to the Category-II (a) or II(b) or III(a) or III(b) of Other Backward Classes. |

<table>
<tr><th>Sl. No.</th><th>Category of post</th><th>Method of recruitment</th><th>Minimum qualification</th></tr>
<tr><th>(1)</th><th>(2)</th><th>(3)</th><th>(4)</th></tr>
<tr><td></td><td></td><td>
(c) Mathematics<br>
(d) Chemistry<br>
(e) Physics<br>
(f) Agriculture<br>
(g) Civil Engineering.<br>
(h) Animal Husbandry & Veterinary Science<br><br>
Option to select Forestry Paper I & II is restricted to B.Sc., (Forestry) graduates only.<br><br>
The syllabus for preliminary and main examination shall be as prescribed by Government from time to time.<br><br>
The KPSC shall prepare two separate main list of qualified candidate in the ratio of 1:5 (vacancy : qualified) in the order of merit based on the marks obtained in the written main examination subject to the orders in force relating to reservation of posts under various categories earmarked by the Government in this behalf. If the marks obtained by two or more candidates is equal, the order of merit shall be fixed on the basis of their age, the older in age being placed above the younger. One list shall be of candidates with B.Sc. Forestry and the other list shall be in respect of candidates other than B.Sc. Forestry.<br><br>
The qualified candidates shall be called for an interview separately by the KPSC. There shall be twenty marks for the interview.<br>
Physical Endurance and Medical Fitness Test:<br><br>
All the candidates who have qualified for the interview shall also be subjected to Physical Endurance Test and medical fitness examination at the time of the interview.<br>
Out of the above list those candidates who qualify in the physical endurance and medical test will be finally selected based on the marks obtained in the qualifying examination and interview, separately under 50% quota for B.Sc., (Forestry) graduates, subject to the orders in force relating to reservation of posts under various categories earmarked by the Government in this behalf. If the marks
</td><td>
(iii) Thirty years in case of others on the date of notification.<br><br>
Provided that in the case of a candidate who is an ex-servicemen, by three years plus the number of years of service rendered by him in the Armed forces of the union.<br><br>
(5) Physical standards:-<br><br>
(a) Must possess the following physical standards, namely:-<br>
<table>
<tr><th colspan="2" rowspan="2">Height Minimum</th><th colspan="2">Chest</th></tr>
<tr><th>Minimum Exhalation</th><th>Minimum expansion on inhalation</th></tr>
<tr><td>Male</td><td>163 cms</td><td>79 cms</td><td>5 cms</td></tr>
<tr><td>Female</td><td>150 cms</td><td>74 cms</td><td>5 cms</td></tr>
</table>
(b) Must have the following standard of distant and near vision with or without glasses.<br><br>
<u>Distant vision</u><br><br>
Better eye Worse eye<br>
6/6 mtrs. or 6/9 mtrs.<br><br>
<u>Near vision</u><br>
Better eye Worse eye<br>
0/6 mtrs. or 0/8 mtrs.<br>
Each eye must have full field vision. Colour blindness, squint or any morbid conditions of the eyes or lids or either eye shall be deemed to be disqualification.<br>
Hearing:<br><br>
Test: (1) Rinner's Test<br>
(2) Webber's Test<br>
(3) Tests for Vertigo<br><br>
Any defects observed during the tests (mentioned above) shall be a disqualification.<br>
(c) The following shall be physical disqualifications, namely:-<br>
Knock-knees<br>
Bow legs<br>
Flat feet<br>
Varicose Veins
</td></tr>
</table>

| Sl. No. | Category of post | Method of recruitment | Minimum qualification |
|---|---|---|---|
| (1) | (2) | (3) | (4) |
| | | obtained by two or more candidates is equal, the order of merit shall be fixed on the basis of their age, the older in age being placed above the younger. This list will be called as 1st list. The candidates who are other than B.Sc. Forestry graduates shall be included in the 2nd list of candidates in the order of merit shall be prepared subject to the orders in force relating to reservation of posts under various catagories earmarked by the Government in this behalf. If the marks obtained by two or more candidates is equal, the order of merit shall be fixed on the basis of their age, the older in age being placed above the younger. This list will be called as 2nd list.<br><br>A final select list equivalent to the number of vacancies notified posts shall be prepared based on the rank obtained from list 1 and 2 and every second vacancy in direct recruitment being filled from the 2nd list.<br><br>The selected candidates shall be appointed as ACF by Government on probation for three years and they shall be deputed for two years Diploma Course in Forestry in any of the SFS Training Colleges or any other Forest Training College recognized by the Govt. of India after executing a indemnity bond with two sureties to the satisfaction of the appointing authority that he shall serve the Department for a period of not less than 5 years failing which the cost of training course shall be reimbursed to Government. During the training period the candidates are eligible to draw the pay scale applicable to the post.<br><br>On successful completion of the Diploma Course in Forestry they shall be put on the Job Training for 12 months.<br><br>Notwithstanding anything contained under Rule 19 of the Karnataka Civil Services (General recruitment) Rules 1977 their period of probation shall be for a period of 3 years.<br><br>Provided that if he fail to complete the forestry diploma training course or probationary period satisfactorily, they shall be discharged from service duly recovering the training cost. | **(6)** Candidates must pass a physical endurance test consisting of a walk of 25 kms in case of male and 16 kms in case of female, to be completed in four hours. |

(2) For the entries relating to the category of post "Range Forest Officers", at serial number 9, the following shall be substituted, namely:-

| | | | |
|---|---|---|---|
| 9. | Range Forest Officer<br>**(Old Scale)**<br>(10800-300-12300-350-14400-400-16800-450-19500-525-20025)<br>**(New Scale)**<br>(21600-600-24600-700-28800-800-33600-900-39000-1050-40050) | Fifty percent by promotion from the cadre of Deputy Range Forest Officers and fifty percent by direct recruitment. Out of the direct recruitment quota, seventy five percent shall be filled by the holders of degree in Bachelor of Science in Forestry and the remaining twenty five percent shall be filled by the holders of Bachelor degree in Science and Bachelor degree in Engineering. [as specified in column 4 under the heading "For direct recruitment" in item (2)].<br>The Principal Chief Conservator of Forests (PCCF) (Head of Forest Force) (hereinafter referred to as Appointing Authority and Recruiting Authority shall call for application in such form as may be notified by him from candidates who possesses the required qualification and the Physical standard as indicated in Column (4) in the Official Gazette and more than one news paper including one in the regional language having wide circulation taking into consideration the number of vacancies in the Department and as directed by the Government and the Government orders relating to reservation in force and duly notifying the number of vacancies to be filled separately from holders of the Bachelor of Science Degree in Forestry and the holders of Science Degree other than B.Sc. (Forestry).<br>**(a) The method of selection shall be as follows:**<br>There shall be a common preliminary examination conducted by the Principal Chief Conservator of Forests (Head of Forest Force) consisting of the following papers.<br>(i) General Knowledge - 100 marks<br>(ii) Aptitude Test - 100 marks<br>Candidates qualified in the preliminary examination in the ratio of 1:10 (Vacancy: Qualified candidates in the preliminary exam), based on the merit and reservation separately from among the holders of the Bachelor of Science Degree in Forestry and the holders of Science Degree other than Forestry shall have to appear for the main examination consisting of the following papers. | **For promotion :-** Must have put in a service of not less than eight years in the cadre of Deputy Range Forest officer.<br>**For direct recruitment:-**<br>**(1) For B.Sc. Forestry Graduates:** Must be holder of a Bachelor of Science in Forestry.<br>**(2) For Science Graduates and Engineering Graduates:-** Must be holder of Bachelor of Science degree in Forestry, Agriculture or Horticulture or Veterinary Science or a holder of Bachelor of a Science degree with two or more of the following subjects namely, Mathematics, Physics, Chemistry, Zoology, Botany, Bio-Chemistry, Micro-biology, Bio-Technology or a holder of Bachelor of Engineering degree in any recognized University.<br>(3) The minimum marks obtained in these degree courses shall not be less than fifty percent of the maximum marks.<br>(4) Notwithstanding anything contained in rule 6 of the Karnataka Civil Services (General Recruitment) Rules, 1977, candidates must have attained the age of eighteen years on the date of notification and must not have attained the age of,-<br>(i) Thirty two years in the case of persons belonging to the Scheduled Castes or Scheduled Tribes or Category-I of other Backward Classes;<br>(ii) Thirty years in the case of a persons belonging to the Category-II (a) or II(b) or III(a) or III(b) of Other Backward Classes.<br>(iii) Twenty seven years in case of others on the date of notification:<br>Provided that in the case of a candidate who is an ex-servicemen, by three years plus the number of years of service rendered by him in the Armed forces of the union. |

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 29 ಸಿಎಸ್‌ಎಸ್ 2008, ಬೆಂಗಳೂರು, ದಿನಾಂಕ : 9–5–2012.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ 29 ಸಿಎಸ್‌ಎಸ್ 2008, ದಿನಾಂಕ : 13–3–2012 ರಲ್ಲಿ ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿ., ಬುಲ್‌ಟೆಂಪಲ್ ರಸ್ತೆ, ಬಸವನಗುಡಿ, ಬೆಂಗಳೂರು–4 ಇದರ ಆಡಳಿತ ಮಂಡಳಿಗೆ ಮಾಡಿದ್ದ ನಾಮನಿರ್ದೇಶನದಲ್ಲಿ ಶ್ರೀ ಶಿವನಗೌಡ ನಿಂಗನಗೌಡ, ನಾಡಗೌಡ, ಮೆಟಗುಡ್ಡ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಸಿ. ಸತೀಶ್**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಪಿ.ಆರ್. 386**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 264 ಬೆಮಪ್ರಾ 2011 ಬೆಂಗಳೂರು, ದಿನಾಂಕ: 9ನೇ ಮೇ, 2012.**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 5 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಬಿಜಾಪುರ ಜಿಲ್ಲೆ ಇಂಡಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಹಾಲಿ ಭೂ ಉಪಯೋಗವನ್ನು ಗುರುತಿಸಲು ದಿನಾಂಕ: 31–03–2012 ರಿಂದ ಜಾರಿಗೆ ಬರುವಂತೆ ನಿರ್ಧರಿಸಿ ಕಾರ್ಯನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎಂ.ವಾಸುದೇವ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 389**

## PERSONNEL AND ADMINISTRATIVE REFORMS SECRETARIAT

### NOTIFICATION

**NO. DPAR 17 SMR 2012, Bangalore, Dated: 17th May, 2012.**

In exercise of the powers conferred by clause (ff) of rule 3 of the Karnataka Government Servants` (Medical Attendance) Rules 1963, the Government of Karnataka hereby adds the following item after item 299 of Schedule I to the said rules, namely:-

**(300) Dr.R.G.Karudagimath Memorial Nursing Home, Badami- 587 201, Bagalkot District.**

By Order and in the Name of the Governor of Karnataka

**D. NAGESH PHATAK,**
Under Secretary to Government ,
Department of Personnel and Administrative Reforms
(Service Rules).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 17 ಎಸ್‌ಎಂಆರ್ 2012, ಬೆಂಗಳೂರು, ದಿನಾಂಕ: 17ನೇ ಮೇ, 2012.**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ರ ನಿಯಮ 3 ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್–I ರ ಐಟಂ 299 ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ :–

**(300) ಡಾ॥ ಆರ್.ಜಿ.ಕಾರುಡಗಿಮಠ ಮೆಮೋರಿಯಲ್ ನರ್ಸಿಂಗ್ ಹೋಮ್, ಬಾದಾಮಿ– 587 201, ಬಾಗಲಕೋಟೆ ಜಿಲ್ಲೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ. ನಾಗೇಶ್ ಪಾಟಕ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು).

**ಪಿ.ಆರ್. 390**

## WOMEN AND CHILD DEVELOPMENT SECRETARIAT

### ADDENDUM

**NO. WCD 20 PHP 2012, Bangalore, Dated: 09th March, 2012.**

In Notification No: WCD 40 PHP 2010, Dated: 23-09-2011, under the heading VI – Appointed under clause (g) of Sub-section (2) of Section 13, after Sl.No.2 the following shall be inserted as Sl.No.3.

``3. Sri Narayana S. Bandage, Member``
MLC,
No.235, Ward No.10,
Opposite to Police Station,
Bagalkote.

By Order and in the Name of the Governor of Karnataka
**B. Kamalamma,**
Under Secretary to Government -2,
Women & Child Development Department.

**P.R : 391**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 429 ವೆಚ್ಚ–12/12, ಬೆಂಗಳೂರು, ದಿನಾಂಕ: 19ನೇ ಮೇ, 2012.**

ಆಡಳಿತ ತರಬೇತಿ ಸಂಸ್ಥೆ, ಮೈಸೂರು, ಇಲ್ಲಿಯ ಆವರಣದಲ್ಲಿ ಆಡಿಟೋರಿಯಂ ನಿರ್ಮಿಸುವ ಕಾಮಗಾರಿಯನ್ನು ₹.2.65 ಕೋಟಿ ವೆಚ್ಚದಲ್ಲಿ ನೇರವಾಗಿ ಕರ್ನಾಟಕ ಗ್ರಾಮೀಣ ಮೂಲ ಸೌಕರ್ಯ ಅಭಿವೃದ್ಧಿ ಸಂಸ್ಥೆಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ4 (ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)ಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಸಿ.ಆ.ಸು ಇಲಾಖೆ (ಆಡಳಿತ ಸುಧಾರಣೆ)ಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ. ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ(ಸಂಗ್ರಹಣಾ ಕೋಶ).

**ಪಿ.ಆರ್. 392**

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 431 ವೆಚ್ಚ–12/12, ಬೆಂಗಳೂರು, ದಿನಾಂಕ: 18ನೇ ಮೇ, 2012.**

ಕರ್ನಾಟಕ ವಿಧಾನಸಭೆ ಸಚಿವಾಲಯದ ಶಾಸಕರ ಭವನದ ಒಟ್ಟು 68 ಮಂದಿ ವಾಹನ ಚಾಲಕರುಗಳಿಗೆ ₹.3.06 ಲಕ್ಷಗಳ ವೆಚ್ಚದಲ್ಲಿ ಎರಡು ಜೊತೆ ಸಮವಸ್ತ್ರ ಬಟ್ಟೆಯನ್ನು ನೇರವಾಗಿ ಮೆ: ರೇಮಂಡ್ಸ್ ಸಂಸ್ಥೆ, ಮಿಲ್ ಶೋ ರೂಂ. ರೇಮಂಡ್ ಶಾಪ್, ಪಬ್ಲಿಕ್ ಯುಟಿಲಿಟಿ ಬಿಲ್ಡಿಂಗ್, ಮೆಯೋಹಾಲ್, ಎಂ.ಜಿ.ರಸ್ತೆ, ಬೆಂಗಳೂರು, ಇಲ್ಲಿಂದ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ4 (ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಕರ್ನಾಟಕ ವಿಧಾನಸಭೆ ಸಚಿವಾಲಯಕ್ಕೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸಮವಸ್ತ್ರಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಕರ್ನಾಟಕ ವಿಧಾನಸಭೆ ಸಚಿವಾಲಯವು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ. ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ(ಸಂಗ್ರಹಣಾ ಕೋಶ).

**ಪಿ.ಆರ್. 393**

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 342 ವೆಚ್ಚ–12/11, ಬೆಂಗಳೂರು, ದಿನಾಂಕ: 19ನೇ ಮೇ, 2012.**

ಖಜಾನೆ ಇಲಾಖೆಯ ಗಣಕಯಂತ್ರಗಳಿಗೆ ಮೆ:ಏಷಿಯಾ ಡೇಟಾ ಸಂಸ್ಥೆಯಿಂದ ₹.3,21,000/- ಗಳ ವೆಚ್ಚದಲ್ಲಿ ದಿನಾಂಕ: 17–02–2012 ರಿಂದ ಮತ್ತೊಂದು ವರ್ಷದ ಅವಧಿಗೆ ``Kapersky Antivirus" ತಂತ್ರಾಂಶವನ್ನು ಅಳವಡಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ4 (ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಖಜಾನೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ. ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ(ಸಂಗ್ರಹಣಾ ಕೋಶ).

**ಪಿ.ಆರ್. 394**

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 369 ವೆಚ್ಚ–12/12, ಬೆಂಗಳೂರು, ದಿನಾಂಕ: 18ನೇ ಮೇ, 2012.**

ಅಧಿಸೂಚನೆ ಸಂಖ್ಯೆ :ಆಇ 954 ವೆಚ್ಚ–12/2010, ದಿನಾಂಕ: 13–01–2011 ರಲ್ಲಿ ಕೇಂದ್ರೀಯ ಉಣ್ಣೆ ಅಭಿವೃದ್ಧಿ ಮಂಡಳಿಯ ಅನುದಾನದ ನೆರವಿನಿಂದ 'ಕುರಿಗಳ ಉಣ್ಣೆ ಸಂಗ್ರಹಣೆ ಮತ್ತು ಮಾರುಕಟ್ಟೆ ವ್ಯವಸ್ಥೆಗೆ ಸುತ್ತು ನಿಧಿ' ಯಡಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ4 (ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ನೀಡಲಾಗಿದ್ದ ವಿನಾಯಿತಿ ಅವಧಿಯನ್ನು ದಿನಾಂಕ: 01–04–2012 ರಿಂದ 31–03–2013ರವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ ಸಂಸ್ಥೆಯು ಈ ಕಾರ್ಯವನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ಉಣ್ಣೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯು ದೃಢಪಡಿಸಿಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ. ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ(ಸಂಗ್ರಹಣಾ ಕೋಶ).

**ಪಿ.ಆರ್. 395**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 389 ವೆಚ್ಚ–12/12, ಬೆಂಗಳೂರು, ದಿನಾಂಕ: 18ನೇ ಮೇ, 2012.**

2012–13ನೇ ಸಾಲಿನಲ್ಲಿ ಸಾರ್ವಜನಿಕ ಉದ್ದಿಮೆಗಳ ಅಧಿಕಾರಿ/ನೌಕರರಿಗೆ ವಿವಿಧ ವಿಷಯಗಳಿಗೆ ತರಬೇತಿಯನ್ನು ನೀಡಲು ಒಟ್ಟು ₹.70.00 ಲಕ್ಷಗಳ ವೆಚ್ಚದಲ್ಲಿ ಈ ಮುಂದಿನ ಪ್ರತಿಷ್ಠಿತ ಸಂಸ್ಥೆಗಳಿಂದ ನೇರವಾಗಿ ಸೇವಾ ಸಂಗ್ರಹಣೆಯನ್ನು ಮಾಡಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ4 (ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸಾರ್ವಜನಿಕ ಉದ್ದಿಮೆಗಳ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

1. ಎನ್.ಪಿ.ಸಿ, ಬೆಂಗಳೂರು
2. ಐ.ಪಿ.ಇ, ಹೈದರಾಬಾದ್
3. ಆರ್.ಐ.ಸಿ.ಎಂ, ಬೆಂಗಳೂರು
4. ಇ.ಡಿ.ಐ, ಅಹಮದಾಬಾದ್
5. ಎಫ್.ಎಂ.ಆರ್. ಪಂಚಗಣಿ
6. ಸಿ.ಇ.ಡಿ.ಓ.ಕೆ, ಧಾರವಾಡ
7. ಕೆ.ಎಸ್.ಎಫ್.ಸಿ, ಬೆಂಗಳೂರು
8. ಐ.ಸಿ.ಡಬ್ಲ್ಯೂ.ಎ, ಬೆಂಗಳೂರು
9. ಎನ್.ಐ.ಎಂ.ಎಸ್.ಎಂ.ಇ, ಹೈದರಾಬಾದ್
10. ಐ.ಐ.ಎಂ.ಎಂ., ಬೆಂಗಳೂರು

ಈ ಸಂಸ್ಥೆಗಳಿಗೆ ತರಬೇತಿಗಾಗಿ ಅಧಿಕಾರಿ/ನೌಕರರನ್ನು ನಿಯೋಜನೆಗೊಳಿಸುವ ಮೊದಲು ಸಂಬಂಧಿತ ಏಜೆನ್ಸಿಗಳು/ಇಲಾಖೆಗಳು ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸಲಾಗುತ್ತಿದೆ ಎಂಬುದನ್ನು ದೃಢಪಡಿಸಿಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ. ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ(ಸಂಗ್ರಹಣಾ ಕೋಶ).

**ಪಿ.ಆರ್. 396**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 412 ವೆಚ್ಚ–12/12, ಬೆಂಗಳೂರು, ದಿನಾಂಕ: 18ನೇ ಮೇ, 2012.**

ಶ್ರೀ ರಾಧಾಕೃಷ್ಣ, ನಿವೃತ್ತ ಹಿರಿಯ ಆಡಿಟ್ ಆಫೀಸರ್, ಮಹಾಲೇಖಪಾಲರ ಕಛೇರಿ, ಇವರ ಸೇವೆಯನ್ನು ಸಮಾಲೋಚಕರಾಗಿ ಮಾಹೆಯಾನ ₹.30.000/- ಗಳ ಸಮಾಲೋಚನಾ ಶುಲ್ಕವಾಗಿ ಒಂದು ವರ್ಷದ ಅವಧಿಗೆ ಅಥವಾ ಶ್ರೀ ಸಿ.ಎಂ. ಶಿರೋಳ್‌ರವರು ಆರ್ಥಿಕ ಇಲಾಖೆಯಲ್ಲಿ ಸಮಾಲೋಚಕರಾಗಿ ಮುಂದುವರೆದ ಅವಧಿ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ4 (ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಆರ್ಥಿಕ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ. ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ(ಸಂಗ್ರಹಣಾ ಕೋಶ).

**ಪಿ.ಆರ್. 397**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 413 ವೆಚ್ಚ–12/12, ಬೆಂಗಳೂರು, ದಿನಾಂಕ: 18ನೇ ಮೇ, 2012.**

ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಭಾರತ ಸರ್ಕಾರದ ಅಂಗ ಸಂಸ್ಥೆಯಾದ Central Institute of Plastic Engineering & Technology (CIPET), ಮೈಸೂರು, ಸಂಸ್ಥೆಯಿಂದ 2012–13ನೇ ಸಾಲಿಗೆ ನೇರವಾಗಿ ತರಬೇತಿಗಳನ್ನು ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ4 (ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸಮಾಜ ಕಲ್ಯಾಣ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ತರಬೇತಿಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಸಮಾಜ ಕಲ್ಯಾಣ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ. ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ(ಸಂಗ್ರಹಣಾ ಕೋಶ).

**ಪಿ.ಆರ್. 398**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 478 ವೆಚ್ಚ–12/12, ಬೆಂಗಳೂರು, ದಿನಾಂಕ: 22ನೇ ಮೇ, 2012.**

ರಾಜ್ಯ ಸರ್ಕಾರದ ಆಸ್ತಿ ಮತ್ತು ಹಣಕಾಸು ನಿರ್ವಹಣೆಗಾಗಿ ಮಹಾಲೇಖಪಾಲರ ಕಛೇರಿಯ ನಿವೃತ್ತ ಅಧಿಕಾರಿಗಳಾದ ಶ್ರೀ ಸಿ.ಎಂ.ರಘೋತ್ತಮ್ ಮತ್ತು ಶ್ರೀ ಕೆ.ವಿ.ವೆಂಕಟೇಶ್, ಇವರ ಸೇವೆಯನ್ನು ತಲಾ ₹.25.000/- ಗಳ ಸಮಾಲೋಚನಾ ಶುಲ್ಕವಾಗಿ ಮತ್ತು ನಿವೃತ್ತ ಖಜಾನೆ ಅಧಿಕಾರಿಯಾದ ಶ್ರೀ ಟಿ.ಎನ್.ನಾಗರಾಜನ್, ಇವರ ಸೇವೆಯನ್ನು ₹.30.000/- ಗಳ ಸಮಾಲೋಚನಾ ಶುಲ್ಕವಾಗಿ ನಿಗದಿಪಡಿಸಿ, ಇವರುಗಳನ್ನು ಆರು ತಿಂಗಳ ಅವಧಿಗೆ ಸಮಾಲೋಚಕರುಗಳಾಗಿ ನೇಮಿಸಿಕೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ4 (ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಆರ್ಥಿಕ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ. ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ(ಸಂಗ್ರಹಣಾ ಕೋಶ).

**ಪಿ.ಆರ್. 401**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 367 ವೆಚ್ಚ–12/12, ಬೆಂಗಳೂರು, ದಿನಾಂಕ: 19ನೇ ಮೇ, 2012.**

ದಿ.ಮೈಸೂರ್ ಪೇಪರ್ ಮಿಲ್ಸ್ ಲಿಮಿಟೆಡ್ ಸಂಸ್ಥೆಯ ಪುನಶ್ಚೇತನಕ್ಕಾಗಿ ಅಧ್ಯಯನ ನಡೆಸಲು ಸಮಾಲೋಚಕ ಸಂಸ್ಥೆಯಾಗಿ ಮೆ: Deloittee ಸಂಸ್ಥೆಯನ್ನು ₹.65.00 ಲಕ್ಷಗಳ ವೆಚ್ಚದಲ್ಲಿ ನೇರವಾಗಿ ನೇಮಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ4 (ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ. ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ(ಸಂಗ್ರಹಣಾ ಕೋಶ).

**ಪಿ.ಆರ್. 402**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 49 ಮುಆಬಿ 2012, ಬೆಂಗಳೂರು, ದಿನಾಂಕ: 10ನೇ ಮೇ, 2012.**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, (1997)ರ ಕಲಂ 23(ಎ)ರ ಅಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕು, ಚಾರ ಗ್ರಾಮದ ಶ್ರೀ ಮಹಿಷಮರ್ಧಿನಿ ದೇವಸ್ಥಾನವನ್ನು ಅಧಿಸೂಚಿತ ಧಾರ್ಮಿಕ ಸಂಸ್ಥೆಗಳ ಪಟ್ಟಿಗೆ ಸೇರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ನಾರಾಯಣಪ್ಪ,**
ಪೀಠಾಧಿಕಾರಿ,
ಕಂದಾಯ ಇಲಾಖೆ(ಮುಜರಾಯಿ).

**ಪಿ.ಆರ್. 403**

## INFRASTRUCTURE DEVELOPMENT SECRETARIAT

### NOTIFICATION

**No. IDD 25 NSW 2010, Bangalore, Dated: 25th May, 2012.**

In pursuance of the Memorandum and Articles of Association of Konkan Railway Corporation Limited (KRCL) and in exercise of the powers under section 187-A of the Companies Act 1956, His Excellency the Governor of Karnataka shareholder of the KRCL hereby appoint Shri.K.V.Rama, Deputy Secretary to Government, Infrastructure Development Department, Vikasa Soudha Bangalore as nominee for exercising the same rights and power (including the right to vote by proxy) as a shareholder of the KRCL for the Extra Ordinary General Meeting of KRCL on 26-05-2012 at Navi Mumbai.

By Order and in the Name of the Governor of Karnataka,
**S.J. SAMPATH KUMAR,**
Under Secretary to Government ,
Infrastructure Development Department.

**P.R : 404**

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಓ 9 ಸಿಎಸ್‌ಎಸ್ 2012, ಬೆಂಗಳೂರು, ದಿನಾಂಕ: 04ನೇ ಮೇ, 2012.**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ(1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ರವೀಂದ್ರ ಶೆಟ್ಟಿ ಬಿನ್ ಮಹಾಬಲ ಶೆಟ್ಟಿ, 'ರವಿಕಿರಣ್' , ಅಂಚೆ: ಕುಮ್ರಗೋಡು – 5762213, ಬ್ರಹ್ಮಾವರ, ಉಡುಪಿ ತಾಲ್ಲೂಕು ಇವರನ್ನು ಉಡುಪಿ ಜಿಲ್ಲೆ ಉಡುಪಿ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ. ಉಡುಪಿ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಸಿ.ಸತೀಶ್,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಪಿ.ಆರ್. 405**

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಓ 54 ಸಿಎಸ್‌ಎಸ್ 2010, ಬೆಂಗಳೂರು, ದಿನಾಂಕ: 17ನೇ ಮೇ, 2012.**

ಸರ್ಕಾರದ ಅಧಿಸೂಚನೆ ಸಂಖ್ಯೆ :ಸಿಓ 54 ಸಿಎಸ್‌ಎಸ್ 2010 ದಿನಾಂಕ 29–03–2010ರಲ್ಲಿ ಚಿಕ್ಕಮಗಳೂರು ಜಿಲ್ಲೆ ಕೊಪ್ಪ ತಾಲ್ಲೂಕು ಲ್ಯಾಂಪ್ಸ್ ಸಹಕಾರ ಸಂಘ ನಿ., ಕೊಪ್ಪ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಮಂಜುನಾಥ ನಾಯಕ್ ಬಿನ್ ಕೊಂಬ ನಾಯಕ್ ನೀರಭಾವಿಜೆಡ್, ಅದ್ದಡ ಅಂಚೆ, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ(1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಕೆ.ಎನ್.ಪಾಂಡುರಂಗ ಬಿನ್ ನಾಗೇಶ ನಾಯ್ಕ, ಶಂಕರ ರೈಸ್ ಮಿಲ್ ಹತ್ತಿರ, ಕೆಳಪೇಟೆ, ಕೊಪ್ಪ ಇವರನ್ನು ಚಿಕ್ಕಮಗಳೂರು ಜಿಲ್ಲೆ, ಕೊಪ್ಪ ತಾಲ್ಲೂಕು, ಲ್ಯಾಂಪ್ಸ್ ಸಹಕಾರ ಸಂಘ ನಿ., ಕೊಪ್ಪ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಸಿ.ಸತೀಶ್,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಪಿ.ಆರ್. 406**

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 30 ಸಿಎಸ್‌ಎಸ್ 2011, ಬೆಂಗಳೂರು, ದಿನಾಂಕ: 17ನೇ ಮೇ, 2012.**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ(1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ವೈ.ರವೀಂದ್ರ ಗೌಡ ಬಿನ್ ಕೂವಪ್ಪ, ಸೋಮಸಂದ್ರ ಗ್ರಾಮ, ಮುದುವಾಡಿ ಹೋಬಳಿ, ಕೋಲಾರ ತಾಲ್ಲೂಕು ಇವರನ್ನು ಕೋಲಾರ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ. ಕೋಲಾರ ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಸಿ.ಸತೀಶ್,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಪಿ.ಆರ್. 407**

## TRANSPORT SECRETARIAT

### NOTIFICATION

**No. SARIE 8 SAENI 2012, Bangalore, Dated: 25th May, 2012.**

In exersise of the powers conferred by sub-clause (1) of section-16 of the Karnataka Motor Vehicle Taxation Act, 1957 (Karnataka Act 35 of 1957) the Government of Karnataka, hereby exempt from payment of Road Tax and also payment of Registration fee to the following Personel vehicle of Mr. Hans Gunter Loffler, Deputy Consul General of Consulate General of Germany.

Name of the Foreign

Representation: Mr, Hans Gunter Loffler, Deputy Consul General.

Personal Vehicle : **01 CC 2A (Innova 2.5 V (E4) 8S)**

( * Vehicle No. to be assigned by the jurisdictional R.T.O)

By Order and in the Name of the Governor of Karnataka,

**RAMACHANDRA,**
Under Secretary to Government ,
Transport Department.

**P.R : 408**

## TRANSPORT SECRETARIAT

### NOTIFICATION

**No. SARIE 9 SAENI 2012, Bangalore, Dated: 25th May, 2012.**

In exercise of the powers conferred by sub-clause (1) of section-16 of the Karnataka Motor Vehicle Taxation Act, 1957 (Karnataka Act 35 of 1957) the Government of Karnataka, hereby exempt from payment of Road Tax and also payment of Registration fee to the following official vehicle of United Nations Industrial Development Organization (UNIDO).

Name of the Foreign

Representation: United Nations Industrial Development Organization (UNIDO).

Personal Vehicle : **06 UN-1 (Toyota Etios VX)**

( * Vehicle No. to be assigned by the jurisdictional R.T.O)

By Order and in the Name of the Governor of Karnataka,

**RAMACHANDRA,**

Under Secretary to Government ,

Transport Department.

**P.R : 409**

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಐಟಿಡಿ 112 ಎಡಿಎಂ 2011, ಬೆಂಗಳೂರು, ದಿನಾಂಕ: 22ನೇ ಮೇ, 2012.**

ಮಾಹಿತಿ ಹಕ್ಕು ಅಧಿನಿಯಮ 2005 (2005ರ ಕೇಂದ್ರ ಕಾಯ್ದೆ) ರ ಸೆಕ್ಷನ್ 4(1)ಎ ಮತ್ತು 4(1) (ಬಿ) ರ ಅಡಿಯಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ ಸಂಬಂಧಿಸಿದಂತೆ ದಿನಾಂಕ: 31–12–2011ರ ಅಂತ್ಯದವರೆಗಿನ ಮಾಹಿತಿಗಳನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಇದನ್ನು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ www.bangaloreitbt.in ವೆಬ್‌ಸೈಟ್‌ನಲ್ಲಿ ಅಳವಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ರಾಮಕೃಷ್ಣಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಪಿ.ಆರ್. 410**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾಪ್ರ 1098 ಕಸಧ 2011, ಬೆಂಗಳೂರು, ದಿನಾಂಕ: 19ನೇ ಮೇ, 2012.**

ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು ಇದರ ಸದಸ್ಯರಾಗಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ |
|---|---|
| 1 | ಶ್ರೀ ದೇವರಾಜ್, ಬೆಂಗಳೂರು. |
| 2 | ಶ್ರೀ ಶಿವಕುಮಾರ ಕೆಸರಮಾಡು, ಮೈಸೂರು. |
| 3 | ಶ್ರೀ ಕೃಷ್ಣ ರಾಯಚೂರು, ಬೆಂಗಳೂರು. |
| 4 | ಶ್ರೀ ರಂಗನಾಥ ಡಿ.ಕೆ., ಬೆಂಗಳೂರು. |
| 5 | ಶ್ರೀಮತಿ ಕಾತ್ಯಾಯಿನಿ ಸಿ.ಎಸ್. ಶಿವಮೊಗ್ಗ. |
| 6 | ಶ್ರೀ ಕೃಷ್ಣ ಕೆ.ಎಂ., ಗದಗ |
| 7 | ಶ್ರೀ ಮುರಳೀಧರ ವಿ. ಕುಲಕರ್ಣಿ ಕೊಲ್ಹಾರ, ಬಸವನಬಾಗೇವಾಡಿ ತಾಲ್ಲೂಕು, ವಿಜಾಪುರ. |
| 8 | ಶ್ರೀ ಸಮೀರಣ ಜೋಷಿ, ರಾಯಚೂರು. |
| 9 | ಪ್ರೊ. ಡಿ.ಎಸ್. ಚೌಗಲೆ, ಬೆಳಗಾವಿ. |
| 10 | ಶ್ರೀ ಯಶವಂತ ಹಿಬಾರೆ, ಬೀದರ್. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಉಪ ಕಾರ್ಯದರ್ಶಿ,

ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ.

**ಪಿ.ಆರ್. 411**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾಪ್ರ 1150 ಕಸಧ 2011, ಬೆಂಗಳೂರು, ದಿನಾಂಕ: 19ನೇ ಮೇ, 2012.**

ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ, ಮಂಗಳೂರು ಇದರ ಸದಸ್ಯರಾಗಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ |
|---|---|
| 1 | ಶ್ರೀ ಪಿ.ಸುಬಾಷ್ ಕಾಮತ್,<br>'ಗಣೇಶ್ ಕೃಪಾ', ಪುಲ್ಕೇರಿ, ಕಾರ್ಕಳ, ಉಡುಪಿ ಜಿಲ್ಲೆ |
| 2 | ಶ್ರೀ ರಾಜರಾಂ ನಾಯಕ್<br>'ಕಲಾಯಿ ಮನೆ', ಕಾವಳಕಟ್ಟೆ ಅಂಚೆ, ಕಾವಳಮೂಡೂರು ಗ್ರಾಮ, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. |
| 3 | ಶ್ರೀ ಮಹೇಶ್ ಆರ್.ನಾಯಕ್,<br>#1–17–11, ಲ್ಯಾಂಡ್ ಲಿಂಕ್ಸ್ ಬಡಾವಣೆ, ಕೊಂಚಾಡಿ, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ. |
| 4 | ಶ್ರೀ ಚಂದ್ರಕಾಂತ ಕಾಮತ್ ಬಿನ್ ವೈ.ಗಣಪತಿ ಕಾಮತ್,<br>ದುರ್ಗಾ ಅಸೋಸಿಯೇಟ್ಸ್, ಎಲ್.ಟಿ.ಎಲ್–29, ಇಂಡಸ್ಟ್ರಿಯಲ್ ಸ್ಟ್ರೀಟ್, ಡ್ಯಾಂ ರಸ್ತೆ, ಹೊಸಪೇಟೆ, ಬಳ್ಳಾರಿ. |
| 5 | ಶ್ರೀ ಚಿದಾನಂದ ಭಂಡಾರಿ,<br>ಕಾಗಲ, ಕುಮಟಾ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. |
| 6 | ಶ್ರೀ ಬಿ.ಎಸ್.ಕಾಮತ್ ಬಿನ್ ದಾಮೋದರ ಕಾಮತ್,<br>5ನೇ ತಿರುವು, ರಾಜೇಂದ್ರ ನಗರ, ಶಿವಮೊಗ್ಗ. |
| 7 | ಶ್ರೀ ಟಿ.ಎ.ಪಿ.ಶಣೈ,<br>ನಂ.187, 7ನೇ ಅಡ್ಡರಸ್ತೆ, 35 ನೇ ಮುಖ್ಯ ರಸ್ತೆ, ಬಿ.ಟಿ.ಎಂ. 2ನೇ ಹಂತ, ಬೆಂಗಳೂರು. |
| 8 | ಶ್ರೀ ರಾಯ್ ಕ್ಯಾಸ್ತಲಿನೊ<br>ರಾಯ್ ಕನ್‌ಸ್ಟ್ರಕ್ಷನ್, ಕಸ್ತೋಲಿನೋ ಕಾಲೋನಿ, ಶಕ್ತಿ ನಗರ, ಮಂಗಳೂರು |
| 9 | ಶ್ರೀ. ಮಂಜುನಾಥ ರಾಯಸಿದ್ಧಿ,<br>ಯಲ್ಲಾಪುರ, ಉತ್ತರ ಕನ್ನಡ ಜಿಲ್ಲೆ. |
| 10 | ಶ್ರೀ ಮಹದೇವರೆಡ್ಡಿ, ಕುಟ್ಟಿಕಾರ್,<br>ಜೊಯಿಡ, ಕಾರವಾರ, ಉತ್ತರ ಕನ್ನಡ ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸುಧಾಕರ ಶೆಟ್ಟಿ**
ಸರ್ಕಾರದ ಉಪ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ.

**ಪಿ.ಆರ್. 412**

## ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ. ಇಡಿ 236 ಎಲ್‌ಐಬಿ 2011, ಬೆಂಗಳೂರು, ದಿನಾಂಕ:23.4.2012**

ಕರ್ನಾಟಕ ಸಾರ್ವಜನಿಕ ಗ್ರಂಥಾಲಯದ ಕಾಯ್ದೆ 1965ರ ಅಧಿನಿಯಮ 10ರ ಉಪ ಪ್ರಕರಣ (1)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಚಿತ್ರದುರ್ಗ ಜಿಲ್ಲಾ ಗ್ರಂಥಾಲಯ ಪ್ರಾಧಿಕಾರಕ್ಕೆ ಈ ಕೆಳಕಂಡ ಸದಸ್ಯರನ್ನು ನಾಮಕರಣ ಮಾಡಿ ಆದೇಶಿಸಿದೆ.

| | ಪ್ರಕರಣ | ವಿವರ | ಪದನಾಮ |
|---|---|---|---|
| 18(1) (ಎ) | ಜಿಲ್ಲೆಯ ಡೆಪ್ಯುಟಿ ಕಮೀಷನರವರು, ಇವರು ಅಧಿಕಾರ ಪ್ರಯುಕ್ತ ಸದರಿ ಪ್ರಾಧಿಕಾರ ವರ್ಗದ ಸಭಾಪತಿಯಾಗಿ (ಚೇರ್ಮನರಾಗಿ) ಇರತಕ್ಕುದು ; | ಮಾನ್ಯ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ | ಅಧ್ಯಕ್ಷರು |

| | ಪ್ರಕರಣ | ವಿವರ | ಪದನಾಮ |
|---|---|---|---|
| 18(1) (ಬಿ) | ಜಿಲ್ಲಾ ವಿದ್ಯಾಧಿಕಾರಿ ಅಥವಾ ಜಿಲ್ಲೆಯ ಎಜ್ಯುಕೇಷನಲ್ ಇನ್‌ಸ್ಪೆಕ್ಟರ್ | ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ | ಸದಸ್ಯರು |
| 18(1) (ಸಿ) | ಜಿಲ್ಲಾ ಅಭಿವೃದ್ಧಿ ಸಭೆಯಿಂದ ಅದರ ಸದಸ್ಯರ ಪೈಕಿ ಚುನಾಯಿತರಾದ ಇಬ್ಬರು ವ್ಯಕ್ತಿಗಳು ; | 1.ಶ್ರೀ ಗಿರಿ ಎಂ. ಜಾನಕಲ್, ಜಿಲ್ಲಾ ಪಂಚಾಯತ್ ಸದಸ್ಯರು, ಹಿರೇಗುಂಟನೂರು, ಚಿತ್ರದುರ್ಗ ತಾ, ಚಿತ್ರದುರ್ಗ ಜಿಲ್ಲೆ.<br>2.ಶ್ರೀಮತಿ ಆರ್. ಪಾರ್ವತಮ್ಮ, ಜಿಲ್ಲಾ ಪಂಚಾಯಿತಿ ಸದಸ್ಯರು, ರಾಮಗಿರಿ, ಹೊಳಲ್ಕೆರೆ (ತಾ), ಚಿತ್ರದುರ್ಗ ಜಿ. | ಸದಸ್ಯರು<br>ಸದಸ್ಯರು |
| 18(1) (ಡಿ) | ಐವತ್ತು ಸಾವಿರಕ್ಕಿಂತ ಕಡಿಮೆ ಯಾಗಿಲ್ಲದ ಜನಸಂಖ್ಯೆಯುಳ್ಳ ಒಂದು ನಗರ ಪಾಲಿಕೆ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯುಳ್ಳದ್ದಾಗಿದ್ದು ಒಂದು ನಗರ ಪುಸ್ತಕ ಭಂಡಾರ ಪ್ರಾಧಿಕಾರ ವರ್ಗವು ಸ್ಥಾಪಿತವಾಗಿರುವ ಪ್ರದೇಶದ ಹೊರತು ಬೇರೆ ಜಿಲ್ಲೆಯಲ್ಲಿ ಇರುವ ಪ್ರತಿ ನಗರ ಪಾಲಿಕೆ ಸಭೆಯಿಂದ ಅಥವಾ ಇತರ ನಗರ ಪಾಲಿಕೆ ಸಂಸ್ಥೆಯಿಂದ ಅವುಗಳ ಸದಸ್ಯರುಗಳ ಪೈಕಿ ಚುನಾಯಿಸಲ್ಪಟ್ಟ ವ್ಯಕ್ತಿ ; | – | – |
| 18(1) (ಇ) | ಐವತ್ತು ಸಾವಿರಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ಒಂದು ನಗರ ಪಾಲಿಕೆ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿ–ಯುಳ್ಳದ್ದಾಗಿದ್ದು ಜಿಲ್ಲೆಯಲ್ಲಿ ಇರುವ ನಗರ ಪಾಲಿಕೆ ಸಭೆಗಳ ಅಥವಾ ಇತರ ನಗರ ಪಾಲಿಕೆ ಸಂಸ್ಥೆಗಳ ಸದಸ್ಯರುಗಳ ಪೈಕಿ ರಾಜ್ಯ ಸರ್ಕಾರದವರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಇಬ್ಬರು ವ್ಯಕ್ತಿಗಳು ; | 1. ಶ್ರೀ ಇ.ವಿ.ಶೀತಲ್ ಕುಮಾರ್, ಸದಸ್ಯರು, 1ನೇ ವಾರ್ಡ್, ಪುರಸಭೆ, ಹೊಸದುರ್ಗ<br>2. ಶ್ರೀ ಹೆಚ್.ವಿ.ಪ್ರಸನ್ನ ಕುಮಾರ್, ಸದಸ್ಯರು, ಪುರಸಭೆ, ಚಳ್ಳಕೆರೆ. | ಸದಸ್ಯರು<br>ಸದಸ್ಯರು |
| 18(1) (ಎಫ್) | ಚಿತ್ರದುರ್ಗ ಪುಸ್ತಕ ಭಂಡಾರ ಸಂಘದ ಜಿಲ್ಲಾ ಶಾಖೆಯ ಕೌನ್ಸಿಲ್ ಯಾವುದಾದರೂ ಇದ್ದರೆ, ಅದರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಇಬ್ಬರು ವ್ಯಕ್ತಿಗಳು ; | ಅಸ್ತಿತ್ವದಲ್ಲಿರುವುದಿಲ್ಲ. | – |
| 18(1) (ಜಿ) | ರಾಜ್ಯ ಸರ್ಕಾರದವರಿಂದ ಜಿಲ್ಲೆಯಲ್ಲಿನ ತಾಲ್ಲೂಕು ಅಭಿವೃದ್ಧಿ ಮಂಡಲಿಗಳ ಸದಸ್ಯರುಗಳ ಪೈಕಿಯಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಒಬ್ಬ ವ್ಯಕ್ತಿ ; | ಶ್ರೀಮತಿ ಪಿ. ಪುಷ್ಪ, ತಾಲ್ಲೂಕು ಪಂಚಾಯಿತಿ ಸದಸ್ಯರು, ಬಬ್ಬೂರು, ಹಿರಿಯೂರು ತಾ, ಚಿತ್ರದುರ್ಗ ಜಿಲ್ಲೆ. | ಸದಸ್ಯರು |
| 18(1) (ಎಚ್) | ಜಿಲ್ಲೆಯಲ್ಲಿನ ಗ್ರಾಮ ಪಂಚಾಯತಿಗಳ ಹಾಗೂ ಟೌನು ಪಂಚಾಯತಿಗಳ ಸದಸ್ಯರುಗಳ ಪೈಕಿಯಿಂದ ರಾಜ್ಯ ಸರ್ಕಾರದವರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಇಬ್ಬರು ವ್ಯಕ್ತಿಗಳು ; | **1.** ಶ್ರೀ ತಿಪ್ಪೇಸ್ವಾಮಿ, ಗ್ರಾಮ ಪಂಚಾಯಿತಿ ಸದಸ್ಯರು, ನಾಯಕನ ಹಟ್ಟಿ<br>**2.** ಶೀಲಾ ಕೇರಾಫ್ ಶ್ರೀದರಮೂರ್ತಿ, ಗ್ರಾಮ ಪಂಚಾಯಿತಿ ಸದಸ್ಯರು, ಇಂಗಳ್‌ದಾಸ್, ಮೆದೇಹಳ್ಳಿ | ಸದಸ್ಯರು<br>ಸದಸ್ಯರು |
| 18(1) (ಐ) | ಜಿಲ್ಲೆಯಲ್ಲಿನ ಸಹಾಯ ಪೋಷಿತ ಪುಸ್ತಕ ಭಂಡಾರಗಳ ಸಂಬಂಧವಾದ ಆಡಳಿತ ಸಂಸ್ಥೆಗಳ ಸದಸ್ಯರುಗಳ ಪೈಕಿಯಲ್ಲಿ ರಾಜ್ಯ ಸರ್ಕಾರದವರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಇಬ್ಬರು ವ್ಯಕ್ತಿಗಳು ; | 1. ಕಾರ್ಯದರ್ಶಿ, ದೇವಾಂಗ ವಿದ್ಯಾ ಸಂಸ್ಥೆ, ಉಚಿತ ಗ್ರಂಥಾಲಯ ಮತ್ತು ವಾಚನಾಲಯ, ಶ್ರೀರಾಂಪುರ, ಹೊಸದುರ್ಗ ತಾ, ಚಿತ್ರದುರ್ಗ ಜಿಲ್ಲೆ. | ಸದಸ್ಯರು |

| | ಪ್ರಕರಣ | ವಿವರ | ಪದನಾಮ |
|---|---|---|---|
| | | 2. ಕಾರ್ಯದರ್ಶಿ, ಅನಾಥ ಸೇವಾಶ್ರಮ ಗ್ರಂಥಾಲಯ ಮತ್ತು ವಾಚನಾಲಯ, ಮಲ್ಲಾಡಿಹಳ್ಳಿ, ಹೊಳಲ್ಕೆರೆ ತಾ, ಚಿತ್ರದುರ್ಗ ಜಿಲ್ಲೆ. | ಸದಸ್ಯರು |
| 18(1) (ಜೆ) | ರಾಜ್ಯ ಸರ್ಕಾರದವರಿಂದ ಅಧಿಕಾರ ಪ್ರಯುಕ್ತ ನಾಮ ನಿರ್ದೇಶನ ಮಾಡಲ್ಪಟ್ಟ ಜಿಲ್ಲೆಯಲ್ಲಿನ ಒಂದು ಮೊದಲನೆಯ ದರ್ಜೆಯ ಕಾಲೇಜಿನ ಒಬ್ಬರು ಪ್ರಿನ್ಸಿಪಾಲರು ; | ಪ್ರಾಂಶುಪಾಲರು, ಸರ್ಕಾರಿ ಪ್ರಥಮ ದರ್ಜೆ ವಿಜ್ಞಾನ ಕಾಲೇಜು, ಚಿತ್ರದುರ್ಗ | ಸದಸ್ಯರು |
| 18(1) (ಕೆ) | ರಾಜ್ಯ ಸರ್ಕಾರದವರಿಂದ ಅಧಿಕಾರ ಪ್ರಯುಕ್ತ ನಾಮ ನಿರ್ದೇಶನ ಮಾಡಲ್ಪಟ್ಟ ಜಿಲ್ಲೆಯಲ್ಲಿನ ಒಂದು ಹೈಸ್ಕೂಲಿನ ಒಬ್ಬ ಮುಖ್ಯೋಪಾಧ್ಯಾಯರು ; | ಮುಖ್ಯೋಪಾಧ್ಯಾಯರು, ಸರ್ಕಾರಿ ಪ್ರೌಢಶಾಲೆ, ಗುಡ್ಡದರಂಗವ್ವನಹಳ್ಳಿ, ಚಿತ್ರದುರ್ಗ ತಾಲೂಕು. | ಸದಸ್ಯರು |
| 18(1) (ಎಲ್) | ರಾಜ್ಯ ಸರ್ಕಾರದವರಿಂದ ಅಧಿಕಾರ ಪ್ರಯುಕ್ತ ನಾಮ ನಿರ್ದೇಶನ ಮಾಡಲ್ಪಟ್ಟ ಜಿಲ್ಲೆಯಲ್ಲಿನ ಅಥವಾ ಅದರ ಒಂದು ಭಾಗದಲ್ಲಿ ಅಧಿಕಾರ ವ್ಯಾಪ್ತಿ ಹೊಂದಿರುವ ವಿದ್ಯಾಭ್ಯಾಸ ಇಲಾಖೆಯ ಒಬ್ಬ ಪದಾಧಿಕಾರಿ ; | ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ ಜಿಲ್ಲೆ. | ಸದಸ್ಯರು |
| 18(1) (ಎಂ) | ಸಾಮಾನ್ಯವಾಗಿ ಜಿಲ್ಲೆಯಲ್ಲಿ ವಾಸ ವಾಗಿರುವ ವ್ಯಕ್ತಿಗಳ ಪೈಕಿ ರಾಜ್ಯ ಸರ್ಕಾರದವರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಮೂವರು ವ್ಯಕ್ತಿಗಳು ಇರತಕ್ಕುದು ; | 1. ಶ್ರೀ ಕೆ.ವೆಂಕಣ್ಣಚಾರ್, ನಿವೃತ್ತ ಸಹಾಯಕ ನಿರ್ದೇಶಕರು, ಜೆ.ಸಿ.ಆರ್., 5ನೇ ಕ್ರಾಸ್, ಚಿತ್ರದುರ್ಗ<br>2. ಶ್ರೀ ಚಂದ್ರಶೇಖರ, ತಾಳ್ಯ, ನಿವೃತ್ತ ಉಪನ್ಯಾಸಕರು, ಪಲ್ಲವಿ ಕಾಲೇಜು ರಸ್ತೆ, ಬಸವ ಲೇಔಟ್, ಹೊಳಲ್ಕೆರೆ<br>3. ಶ್ರೀಮತಿ ಶರೀಫ್ ಬಿ., ನಿವೃತ್ತ ಅಧ್ಯಾಪಕರು, ಮಕ್ಕಾ ಮಸೀದಿ ಎದುರು, ಹೊಳಲ್ಕೆರೆ ರೋಡ್, ಚಿತ್ರದುರ್ಗ | ಸದಸ್ಯರು<br>ಸದಸ್ಯರು<br>ಸದಸ್ಯರು |
| 18 (2) | ಉಪಾಧ್ಯಕ್ಷರು, ಜಿಲ್ಲಾ ಗ್ರಂಥಾಲಯ ಪ್ರಾದಿಕಾರ, ಚಿತ್ರದುರ್ಗ ಜಿಲ್ಲೆ | ಪ್ರಾಧಿಕಾರ ರಚನೆಯಾದ ನಂತರ ಚುನಾಯಿಸಲಾಗುವುದು. | ಉಪಾಧ್ಯಕ್ಷರು |
| 18 (3) | ಜಿಲ್ಲೆಯ ಮುಖ್ಯ ಪುಸ್ತಕ ಭಂಡಾರಾಧಿಕಾರಿಯು ಅಧಿಕಾರ ಪ್ರಯುಕ್ತ ಜಿಲ್ಲಾ ಪುಸ್ತಕ ಭಂಡಾರ ಪ್ರಾಧಿಕಾರ ವರ್ಗದ ಮತ್ತು ಸದರಿ ಪ್ರಾಧಿಕಾರ ವರ್ಗದ ಸಮಿತಿಗಳ ಕಾರ್ಯದರ್ಶಿಯಾಗಿರತಕ್ಕುದು. | ಮುಖ್ಯ ಗ್ರಂಥಾಲಯಾಧಿಕಾರಿ, ಜಿಲ್ಲಾ ಕೇಂದ್ರ ಗ್ರಂಥಾಲಯ, ಚಿತ್ರದುರ್ಗ | ಸದಸ್ಯರು ಹಾಗೂ ಪದನಿಮಿತ್ತ ಕಾರ್ಯದರ್ಶಿಗಳು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಪಟಗಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಸಾಮಾನ್ಯ)

ಪಿ.ಆರ್. 324

## ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ.ಇಡಿ 175 ಎಲ್‌ಐಬಿ 2012, ಬೆಂಗಳೂರು, ದಿನಾಂಕ:11.05.2012**

ಕರ್ನಾಟಕ ಸಾರ್ವಜನಿಕ ಗ್ರಂಥಾಲಯಗಳು ಅಧಿನಿಯಮ 1965ರ ಕರ್ನಾಟಕ 10ನೇ ಅಧಿನಿಯಮ ಪ್ರಕರಣ 18 ರಲ್ಲಿನ ಪ್ರದತ್ತವಾದ ಅಧಿಕಾರದನ್ವಯ ಹಾಸನ ಜಿಲ್ಲಾ ಗ್ರಂಥಾಲಯ ಪ್ರಾಧಿಕಾರಕ್ಕೆ ಈ ಕೆಳಕಂಡ ಸದಸ್ಯರನ್ನು ನಾಮಕರಣ ಮಾಡಿ ಆದೇಶಿಸಿದೆ.

| | ಪ್ರಕರಣ | ವಿವರ | ಪದನಾಮ |
|---|---|---|---|
| 18(1) (ಎ) | ಜಿಲ್ಲೆಯ ಜಿಲ್ಲಾಧಿಕಾರಿಯವರ ಅಧಿಕಾರ ಪ್ರಯುಕ್ತ ಸದರಿ ಪ್ರಾಧಿಕಾರ ವರ್ಗದ ಅಧ್ಯಕ್ಷರಾಗಿರತಕ್ಕದ್ದು ; | ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ | ಅಧ್ಯಕ್ಷರು |
| 18(1) (ಬಿ) | ಜಿಲ್ಲಾ ವಿದ್ಯಾಧಿಕಾರಿ ಅಥವಾ ಜಿಲ್ಲೆಯ ವಿದ್ಯಾ ತನಿಖಾಧಿಕಾರಿಗಳು | ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಹಾಸನ | ಸದಸ್ಯರು |
| 18(1) (ಸಿ) | ಜಿಲ್ಲಾ ಅಭಿವೃದ್ಧಿ ಸಭೆಯಿಂದ ಅದರ ಸದಸ್ಯರ ಪೈಕಿ ಚುನಾಯಿತರಾದ ಇಬ್ಬರು ವ್ಯಕ್ತಿಗಳು ; | 1.ಶ್ರೀಮತಿ ಶಾಂತಮ್ಮ, ಜಿಲ್ಲಾ ಪಂಚಾಯತ್ ಸದಸ್ಯರು, ಮೊಸಳೆ ಹೊಸಹಳ್ಳಿ ಕ್ಷೇತ್ರ ಹಾಸನ ತಾ ಮತ್ತು ಜಿಲ್ಲೆ<br>2.ಶ್ರೀಮತಿ ಯಶೋಧಮ್ಮ, ಜಿಲ್ಲಾ ಪಂಚಾಯತ್ ಸದಸ್ಯರು, ನಿಡುವಣಿ ಕ್ಷೇತ್ರ, ಹೊಳೇನರಸೀಪುರ.ತಾ ಹಾಸನ ಜಿ | ಸದಸ್ಯರು<br>ಸದಸ್ಯರು |
| 18(1) (ಡಿ) | ಐವತ್ತು ಸಾವಿರಕ್ಕಿಂತ ಕಡಿಮೆ ಯಾಗಿಲ್ಲದ ಜನಸಂಖ್ಯೆಯುಳ್ಳ ಒಂದು ನಗರ ಪಾಲಿಕೆ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯುಳ್ಳದ್ದಾಗಿದ್ದು ಒಂದು ನಗರ ಪುಸ್ತಕ ಭಂಡಾರ ಪ್ರಾಧಿಕಾರ ವರ್ಗವು ಸ್ಥಾಪಿತವಾಗಿರುವ ಪ್ರದೇಶದ ಹೊರತು ಬೇರೆ ಜಿಲ್ಲೆಯಲ್ಲಿ ಇರುವ ಪ್ರತಿ ನಗರ ಪಾಲಿಕೆ ಸಭೆಯಿಂದ ಅಥವಾ ಇತರ ನಗರ ಪಾಲಿಕೆ ಸಂಸ್ಥೆಯಿಂದ ಅವುಗಳ ಸದಸ್ಯರುಗಳ ಪೈಕಿ ಚುನಾಯಿಸಲ್ಪಟ್ಟ ಒಬ್ಬ ವ್ಯಕ್ತಿ ; | ಅಸ್ತಿತ್ವದಲ್ಲಿಲ್ಲ | – |
| 18(1) (ಇ) | ಐವತ್ತು ಸಾವಿರಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ಒಂದು ನಗರಪಾಲಿಕೆ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯುಳ್ಳದ್ದಾಗಿದ್ದು ಜಿಲ್ಲೆಯಲ್ಲಿ ಇರುವ ನಗರ ಪಾಲಿಕೆ ಸಭೆಗಳ ಅಥವಾ ಇತರ ನಗರ ಪಾಲಿಕೆ ಸಂಸ್ಥೆಗಳ ಸದಸ್ಯರುಗಳ ಪೈಕಿ ರಾಜ್ಯ ಸರ್ಕಾರದವರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಇಬ್ಬರು ವ್ಯಕ್ತಿಗಳು; | ಅಸ್ತಿತ್ವದಲ್ಲಿಲ್ಲ | – |
| 18(1) (ಎಫ್) | ಕರ್ನಾಟಕ ಗ್ರಂಥಾಲಯ ಸಂಘದ ಜಿಲ್ಲಾ ಶಾಖೆಯು ಯಾವುದಾದರೂ ಇದ್ದರೆ, ಅದರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಒಬ್ಬ ವ್ಯಕ್ತಿ; | ಶ್ರೀ ಹೆಚ್. ಅನಂತರಾಮು, ಎಂ.ಎ.ಎಂ.ಲಿಬ್. ಗ್ರಂಥಪಾಲಕರು, ಮಲೆನಾಡು ತಾಂತ್ರಿಕ ಮಹಾವಿದ್ಯಾಲಯ, ಹಾಸನ | ಸದಸ್ಯರು |
| 18(1) (ಜಿ) | ರಾಜ್ಯ ಸರ್ಕಾರದವರಿಂದ ಜಿಲ್ಲೆಯಲ್ಲಿನ ತಾಲ್ಲೂಕು ಅಭಿವೃದ್ಧಿ ಮಂಡಲಿಗಳ ಸದಸ್ಯರುಗಳ ಪೈಕಿಯಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಒಬ್ಬ ವ್ಯಕ್ತಿ ; | ಶ್ರೀ ಕುಮಾರ್, ತಾಲೂಕು ಪಂಚಾಯತ್ ಸದಸ್ಯರು, ಬಿಕ್ಕೋಡು ಕ್ಷೇತ್ರ, ಬೇಲೂರು ತಾ :ಹಾಸನ ಜಿಲ್ಲೆ | ಸದಸ್ಯರು |
| 18(1) (ಹೆಚ್) | ಜಿಲ್ಲೆಯಲ್ಲಿನ ಗ್ರಾಮ ಪಂಚಾಯತಿಗಳ ಹಾಗೂ ಟೌನು ಪಂಚಾಯತಿಗಳ ಸದಸ್ಯರುಗಳ ಪೈಕಿಯಿಂದ ರಾಜ್ಯ ಸರ್ಕಾರದವರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಇಬ್ಬರು ವ್ಯಕ್ತಿಗಳು ; | 1.ಶ್ರೀ ಬಿ.ಡಿ. ಶಾಂತೇಗೌಡ, ಗ್ರಾಮ ಪಂಚಾಯಿತಿ ಸದಸ್ಯರು, ಸನ್ಯಾಸಿ ಹಳ್ಳಿ, ಗ್ರಾ.ಪಂ. ಬೇಲೂರು ತಾ,ಹಾಸನ.ಜಿಲ್ಲೆ<br>2.ಶ್ರೀ ಎ.ಪಿ. ಚಂದ್ರಯ್ಯ, ಗ್ರಾಮ ಪಂಚಾಯಿತಿ ಸದಸ್ಯರು, ಅಗ್ಗುಂದ ಗ್ರಾ.ಪಂ. ಅರಸೀಕೆರೆ.ತಾ,ಹಾಸನ ಜಿ : | ಸದಸ್ಯರು<br>ಸದಸ್ಯರು |

| | ಪ್ರಕರಣ | ವಿವರ | ಪದನಾಮ |
|---|---|---|---|
| 18(1) (ಐ) | ಜಿಲ್ಲೆಯಲ್ಲಿನ ಸಹಾಯ ಪೋಷಿತ ಪುಸ್ತಕ ಭಂಡಾರಗಳ ಸಂಬಂಧವಾದ ಆಡಳಿತ ಸಂಸ್ಥೆಗಳ ಸದಸ್ಯರುಗಳ ಪೈಕಿಯಲ್ಲಿ ರಾಜ್ಯ ಸರ್ಕಾರದವರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಇಬ್ಬರು ವ್ಯಕ್ತಿಗಳು ; | ಅಸ್ತಿತ್ವದಲ್ಲಿಲ್ಲ | – |
| 18(1) (ಜೆ) | ರಾಜ್ಯ ಸರ್ಕಾರದವರಿಂದ ಅಧಿಕಾರ ಪ್ರಯುಕ್ತ ನಾಮ ನಿರ್ದೇಶನ ಮಾಡಲ್ಪಟ್ಟ ಜಿಲ್ಲೆಯಲ್ಲಿನ ಒಂದು ಮೊದಲನೆಯ ದರ್ಜೆಯ ಕಾಲೇಜಿನ ಒಬ್ಬರು ಪ್ರಿನ್ಸಿಪಾಲರು ; | ಪ್ರಿನ್ಸಿಪಾಲರು,<br>ವಿಜ್ಞಾನ ಪ್ರಥಮ ದರ್ಜೆ ಕಾಲೇಜು, ಹಾಸನ. | ಸದಸ್ಯರು |
| 18(1) (ಕೆ) | ರಾಜ್ಯ ಸರ್ಕಾರದವರಿಂದ ಅಧಿಕಾರ ಪ್ರಯುಕ್ತ ನಾಮ ನಿರ್ದೇಶನ ಮಾಡಲ್ಪಟ್ಟ ಜಿಲ್ಲೆಯಲ್ಲಿನ ಒಂದು ಹೈಸ್ಕೂಲಿನ ಒಬ್ಬ ಮುಖ್ಯೋಪಾಧ್ಯಾಯರು ; | ಮುಖ್ಯೋಪಾಧ್ಯಾಯರು,<br>ಸರಕಾರಿ ಪ್ರೌಢಶಾಲೆ,<br>ದಾಸರಕೊಪ್ಪಲು, ಹಾಸನ (ತಾ). | ಸದಸ್ಯರು |
| 18(1) (ಎಲ್) | ರಾಜ್ಯ ಸರ್ಕಾರದವರಿಂದ ಅಧಿಕಾರ ಪ್ರಯುಕ್ತ ನಾಮ ನಿರ್ದೇಶನ ಮಾಡಲ್ಪಟ್ಟ ಜಿಲ್ಲೆಯಲ್ಲಿನ ಅಥವಾ ಅದರ ಒಂದು ಭಾಗದಲ್ಲಿ ಅಧಿಕಾರ ವ್ಯಾಪ್ತಿ ಹೊಂದಿರುವ ವಿದ್ಯಾಭ್ಯಾಸ ಇಲಾಖೆಯ ಒಬ್ಬ ಪದಾಧಿಕಾರಿ ; | ಕ್ಷೇತ್ರ ಶಿಕ್ಷಣಾಧಿಕಾರಿಗಳು,<br>ಸಾರ್ವಜನಿಕ ಶಿಕ್ಷಣ ಇಲಾಕೆ,<br>ಚೆನ್ನರಾಯಪಟ್ಟಣ. | ಸದಸ್ಯರು |
| 18(1) (ಎಂ) | ಸಾಮಾನ್ಯವಾಗಿ ಜಿಲ್ಲೆಯಲ್ಲಿ ವಾಸ ವಾಗಿರುವ ವ್ಯಕ್ತಿಗಳ ಪೈಕಿ ರಾಜ್ಯ ಸರ್ಕಾರದವರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಮೂವರು ವ್ಯಕ್ತಿಗಳು ಇರತಕ್ಕುದು ; | 1.ಕು. ಗೊರೂರು ಪಂಕಜ (ಲೇಖಕರು) ಪೇಟೆ ಬೀದಿ, ಗೊರೂರು, ಹಾಸನ ತಾ: ಜಿಲ್ಲೆ<br>2. ಶ್ರೀ ಭೋಜರಾಜ್, ಕೇರಾಫ್ ರಂಗಸ್ವಾಮಿ, ಶ್ರೀ ಕಂಠೇಶ್ವರ ನಿಲಯ, ಗುಂಡೇಗೌಡನಕೊಪ್ಪಲು, ಬಸ್ಟಾಂಡ್ ಹತ್ತಿರ, ವಿದ್ಯಾ ನಗರ, ಹಾಸನ.<br>3.ಶ್ರೀ ರಾಜಶೇಖರ್, ಶಾಂತಿ ಗ್ರಾಮ, ದೊಡ್ಡಮನೆ, ರಾಮಮಂದಿರ ರಸ್ತೆ, ಶಾಂತಿ ಗ್ರಾಮ,ಹಾಸನ.ತಾ : ಜಿಲ್ಲೆ | ಸದಸ್ಯರು<br>ಸದಸ್ಯರು<br>ಸದಸ್ಯರು |
| 18(2) | ಜಿಲ್ಲಾ ಪುಸ್ತಕ ಭಂಡಾರದ ಪ್ರಾಧಿಕಾರ ವರ್ಗದ ಉಪಸಭಾಪತಿಯವರ (ವೈಸ್‌ಚೇರ್ಮನ್ನರು) ಸದಸ್ಯರಿಂದ ಅವರ ಪೈಕಿಯಿಂದಲೇ ಚುನಾಯಿಸಲ್ಪಡತಕ್ಕುದು | ಜಿಲ್ಲಾ ಗ್ರಂಥಾಲಯ ಸಭೆಯ ಪ್ರಾಧಿಕಾರಿಗಳ ಸದಸ್ಯರು ತಮ್ಮಲ್ಲಿ ಒಬ್ಬರನ್ನು ಉಪಾಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಳ್ಳುವುದು. | ಉಪಾಧ್ಯಕ್ಷರು |
| 18(3) | ಜಿಲ್ಲೆಯ ಮುಖ್ಯ ಪುಸ್ತಕ ಭಂಡಾರಾಧಿಕಾರಿಯು ಅಧಿಕಾರ ಪ್ರಯುಕ್ತ ಜಿಲ್ಲಾ ಪುಸ್ತಕ ಭಂಡಾರ ಪ್ರಾಧಿಕಾರ ವರ್ಗದ ಮತ್ತು ಸದರಿ ಪ್ರಾಧಿಕಾರ ವರ್ಗದ ಸಮಿತಿಗಳ ಕಾರ್ಯದರ್ಶಿಯಾಗಿರತಕ್ಕುದು. | ಮುಖ್ಯ ಗ್ರಂಥಾಲಯಾಧಿಕಾರಿ<br>ಜಿಲ್ಲಾ ಕೇಂದ್ರ ಗ್ರಂಥಾಲಯ ಹಾಸನ. | ಸದಸ್ಯರು ಹಾಗೂ ಪದನಿಮಿತ್ತ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ.ಪಟಗಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ(ಸಾಮಾನ್ಯ)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ

ಪಿ.ಆರ್. 373

# ಶಿಕ್ಷಣ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ.ಇಡಿ 235 ಎಲ್‌ಐಬಿ 2012, ಬೆಂಗಳೂರು, ದಿನಾಂಕ:09.05.2012**

ಕರ್ನಾಟಕ ಸಾರ್ವಜನಿಕ ಗ್ರಂಥಾಲಯಗಳು ಅಧಿನಿಯಮ 1965ರ ಕರ್ನಾಟಕ 10ನೇ ಅಧಿನಿಯಮ ಪ್ರಕರಣ 17(1)(ಎ) ರಿಂದ (ಹೆಚ್) ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ದಾವಣಗೆರೆ ನಗರ ಗ್ರಂಥಾಲಯ ಪ್ರಾಧಿಕಾರಕ್ಕೆ ಈ ಕೆಳಕಂಡ ಸದಸ್ಯರನ್ನು ನಾಮಕರಣ ಮಾಡಿ ಆದೇಶಿಸಿದೆ.

| | ಪ್ರಕರಣ | ವಿವರ | ಪದನಾಮ |
|---|---|---|---|
| 17(1) (ಎ) | ಪ್ರಾಧಿಕಾರ ಪದನಿಮಿತ್ತ ಅಧ್ಯಕ್ಷರಾಗುವ ನಗರದ ಮಹಾನಗರ ಪಾಲಿಕೆ ಅಥವಾ ನಗರಸಭೆ ಅಥವಾ ಇತರೆ ಪೌರ ಸಂಸ್ಥೆಯ ಅಧ್ಯಕ್ಷರು | ಮಹಾಪೌರರು ಮಹಾನಗರ ಪಾಲಿಕೆ, ದಾವಣಗೆರೆ | ಅಧ್ಯಕ್ಷರು |
| 17(1) (ಬಿ) | ಪ್ರಾಧಿಕಾರ ಉಪಾಧ್ಯಕ್ಷರಾಗುವ ಸರ್ಕಾರದಿಂದ ಪದನಿಮಿತ್ತ ನಾಮಕರಣ ಹೊಂದುವ ನಗರದ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರು. | ಪ್ರಾಂಶುಪಾಲರು, ಡಿ.ಆರ್.ಎಂ. ವಿಜ್ಞಾನ ಕಾಲೇಜು, ದಾವಣಗೆರೆ. | ಉಪಾಧ್ಯಕ್ಷರು |
| 17(1) (ಸಿ) | ನಗರದ ನಗರಪಾಲಿಕೆ. ನಗರ ಸಭೆ ಅಥವಾ ಇತರ ನಗರಪಾಲಿಕೆ ಸಂಸ್ಥೆಯಿಂದ ಅದರ ಸದಸ್ಯರುಗಳ ಪೈಕಿಯಿಂದ ಚುನಾಯಿಸಲ್ಪಡುವ ಇಬ್ಬರು ವ್ಯಕ್ತಿಗಳು ; | ಶ್ರೀಮತಿ ಟಿ.ಹಾಲಮ್ಮ ಮಹಾನಗರಪಾಲಿಕೆ ಸದಸ್ಯರು<br>ಶ್ರೀ ಮಹೇಶ್ ರಾಯಚೂರು ಮಹಾನಗರಪಾಲಿಕೆ ಸದಸ್ಯರು | ಸದಸ್ಯರು<br>ಸದಸ್ಯರು |
| 17(1) (ಡಿ) | ನಗರದ ಅನುದಾನ ಪಡೆಯುತ್ತಿರುವ ಗ್ರಂಥಾಲಯಗಳ ಆಡಳಿತ ಮಂಡಳಿ ಸದಸ್ಯರ ಪೈಕಿ ಸರ್ಕಾರದವರಿಂದ ನಾಮಕರಣ ಹೊಂದುವ ಒಬ್ಬ ವ್ಯಕ್ತಿ ; | ಕಾರ್ಯದರ್ಶಿಗಳು, ವೀರಶೈವ ಸಾಹಿತ್ಯ ಸೇವಾ ಮಂಡಳಿ, ದಾವಣಗೆರೆ | ಸದಸ್ಯರು |
| 17(1) (ಇ) | ಸರ್ಕಾರದಿಂದ ಪದನಿಮಿತ್ತ ನಾಮಕರಣ ಹೊಂದುವ ನಗರದ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರು ; | ಮುಖ್ಯೋಪಾಧ್ಯಾಯರು ಸೆಂಟ್‌ಪಾಲ್ ಕಾನ್ವೆಂಟ್ ಪ್ರೌಢಶಾಲೆ, ದಾವಣಗೆರೆ. | ಸದಸ್ಯರು |
| 17 (1) (ಎಫ್) | ಮೈಸೂರು ಪುಸ್ತಕ ಭಂಡಾರ ಸಂಘದ ನಗರ ಶಾಖೆ ಯಾವುದಾದರೂ ಇದ್ದರೆ, ಅದರ ಸಮಿತಿಯಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಒಬ್ಬ ವ್ಯಕ್ತಿ ; | ಅಸ್ತಿತ್ವದಲ್ಲಿಲ್ಲ | – |
| 17(1) (ಜಿ) | ನಗರದಲ್ಲಿ ಅಧಿಕಾರ ವ್ಯಾಪ್ತಿಯು ರಾಜ್ಯ ಸರ್ಕಾರದವರಿಂದ ಅಧಿಕಾರ ಪ್ರಯುಕ್ತ ನಾಮ ನಿರ್ದೇಶನ ಮಾಡಲ್ಪಟ್ಟ ವಿದ್ಯಾಭ್ಯಾಸ ಇಲಾಖೆಯ ಸಭಾಧಿಕಾರಿ ; | ಕ್ಷೇತ್ರ ಶಿಕ್ಷಣಾಧಿಕಾರಿಗಳು, ಉತ್ತರ ವಲಯ, ದಾವಣಗೆರೆ | ಸದಸ್ಯರು |
| 17 (1) (ಹೆಚ್) | ಸಾಮಾನ್ಯವಾಗಿ ನಗರದಲ್ಲೇ ವಾಸ ವಾಗಿರುವ ವ್ಯಕ್ತಿಗಳ ಪೈಕಿ ರಾಜ್ಯ ಸರ್ಕಾರದವರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಇಬ್ಬರು ವ್ಯಕ್ತಿಗಳು ಇರತಕ್ಕುದು ; | 1) ಶಾಂತಕುಮಾರ್ ಬಿನ್ ಬಸಯ್ಯ, ಕಿರಣಿ ಅಂಗಡಿ, ಚೌಕಿಪೇಟೆ, ದಾವಣಗೆರೆ.<br>2) ಮಂಜುನಾಥ ಬಿನ್ ಲಕ್ಷಣಪ್ಪ ಸಂ.48, ದೇವರಾಜನಗರ ಬೇತೂರು ರಸ್ತೆ, ದಾವಣಗೆರೆ. | ಸದಸ್ಯರು<br>ಸದಸ್ಯರು |
| 17 (2) | ನಗರದ ಮುಖ್ಯ ಪುಸ್ತಕ ಭಂಡಾರಾಧಿಕಾರಿಯು ನಗರದ ಪುಸ್ತಕ ಭಂಡಾರ ಪ್ರಾಧಿಕಾರ ವರ್ಗದ ಮತ್ತು ಸದರಿ ಪ್ರಾಧಿಕಾರ ವರ್ಗದ ಸಮಿತಿಗಳ ಅಧಿಕಾರ ಪ್ರಯುಕ್ತ ಕಾರ್ಯದರ್ಶಿಯಾಗಿರತಕ್ಕುದು. | ಮುಖ್ಯ ಗ್ರಂಥಾಲಯಾಧಿಕಾರಿ ನಗರ ಕೇಂದ್ರ ಗ್ರಂಥಾಲಯ ದಾವಣಗೆರೆ. | ಸದಸ್ಯರು ಮತ್ತು ಪದನಿಮಿತ್ತ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ.ಪಟಗಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ(ಸಾಮಾನ್ಯ)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ

**ಪಿ.ಆರ್. 378**